ಪ್ರಥಮ ವಿಶ್ವ ಕನ್ನಡ ಸಮ್ಮೇಳನ ಸಾಹಿತ್ಯ ಮಾಲೆ ೭೪

ವಿಚಾರ ಸಾಹಿತ್ಯ

# ಮೋದರಕಲ್ಲು ಮತ್ತು ಇತರ ಪ್ರಬಂಧಗಳು

ಜೀ. ಶಂ. ಪರಮಶಿವಯ್ಯ






ಕರ್ನಾಟಕ ಸರ್ಕಾರ 1983

ಶ್ರೀ ಕಾಶೀ ಜಗದ್ಗುರು ವಿಶ್ವಾರಾಧ್ಯ ಜ್ಞಾನಸಿಂಹಾಸನದ
ಜ್ಞಾನ ಮಂದಿರಕ್ಕೆ ದಾವಣಗೆರೆ ವೇ|| ಬಿ. ಎಂ. ಚನ್ನಬಸಯ್ಯನವರು
ಸಮರ್ಪಿಸಿದ್ದು.
ತಾ. 20-1-1988 ನೇ ಬುಧವಾರ

# ಮೇದರ ಕಲ್ಲು
ಮತ್ತು
# ಇತರ ಪ್ರಬಂಧಗಳು

ಡಾ. ಜೀ. ಶಂ. ಪರಮಶಿವಯ್ಯ





ವಿಶ್ವ ಕನ್ನಡ ಸಮ್ಮೇಳನ
14-3ಎ, ನೃಪತುಂಗ ರಸ್ತೆ
ಬೆಂಗಳೂರು-560 002

MEDARAKALLU MATHU ITARA PRABHANDHAGALU (Medarakallu and other Essays)-A collection of essays in Kannada by Dr. J. S. Paramashivaiah, Published by K. Jayacharya, K.A.S., Additional Director, Directorate of Kannada & Culture (Viswa Kannada Sammelana) 14/3A, Nrupathunga Road, Bangalore-560 002. Pages 8+136, 5,000 Copies.







ಮೊದಲನೇ ಮುದ್ರಣ : ೧೯೮೩



ಬೆಲೆ : ೧–೫೦ ರೂಪಾಯಿಗಳು

ಮುದ್ರಕರು
ಶ್ರೀ ವಿನಾಯಕ ಪ್ರಿಂಟಿಂಗ್ ವರ್ಕ್ಸ್
ಮೈಸೂರು–570 004

ಆರ್. ಗುಂಡುರಾವ್
ಮುಖ್ಯ ಮಂತ್ರಿ



ವಿಧಾನ ಸೌಧ
ಬೆಂಗಳೂರು
ದಿನಾಂಕ : ೧೮–೯–೧೯೮೨

## ಸಂಕಲ್ಪ....ಸಿದ್ಧಿ

ಸುಮಾರು ಎರಡು ಸಾವಿರ ವರ್ಷಗಳಿಗೂ ಹೆಚ್ಚು ದೀರ್ಘವಾದ ಐತಿಹಾಸಿಕ ಪರಂಪರೆ ಕನ್ನಡ ನಾಡಿನದು. ಈ ಅವಧಿಯಲ್ಲಿ ಕನ್ನಡ ಭಾಷೆ, ಸಾಹಿತ್ಯ, ಕಲೆ, ಸಂಸ್ಕೃತಿಗಳು ಸಮೃದ್ಧವಾಗಿ, ಶ್ರೀಮಂತವಾಗಿ ಬೆಳೆದು, ಈ ನಾಡಿನ ಇತಿಹಾಸವನ್ನು ಭವ್ಯವಾಗಿಸಿವೆ.

ಒಂದು ನಾಡಿನ ಅಂತಃಸತ್ವ ಅಡಕವಾಗಿರುವುದೇ ಅದರ ಸಾಂಸ್ಕೃತಿಕ ನೆಲೆಗಟ್ಟಿನಲ್ಲಿ. ಈ ನೆಲೆಗಟ್ಟು ಭದ್ರವಾಗಿರಬೇಕಾದರೆ ಸಾಂಸ್ಕೃತಿಕ ಪರಂಪರೆ ಉತ್ಕರ್ಷಕ್ಕೆ ಏರಲು, ಔನ್ನತ್ಯ ಸಾಧಿಸಲು ನಿರಂತರವಾಗಿ ಪ್ರಯತ್ನಗಳು ನಡೆಯಬೇಕು.

ಭಾರತೀಯ ಸಂಸ್ಕೃತಿಯಲ್ಲಿ ಹಾಸುಹೊಕ್ಕಾಗಿ ಬೆಸೆದುಕೊಂಡಿದ್ದರೂ ಕನ್ನಡ ತನ್ನದೇ ಆದ ವಿಶಿಷ್ಟ ಸಂಸ್ಕಾರಗಳನ್ನು, ಸಂಸ್ಕೃತಿಯನ್ನು ಹೊಂದಿದೆ.

ಕನ್ನಡ ನಾಡಿನ ಭವ್ಯ ಪರಂಪರೆಯನ್ನು ಜಾಗತಿಕ ಹಿನ್ನೆಲೆಯಲ್ಲಿ ಚಿತ್ರಿಸಿ, ವಿಶ್ವಕ್ಕೆ ಕನ್ನಡ ಸಂಸ್ಕೃತಿಯ ಹಿರಿಮೆಯನ್ನು ಸಾರುವ ಸದುದ್ದೇಶದಿಂದ ಪ್ರಥಮ ವಿಶ್ವ ಕನ್ನಡ ಸಮ್ಮೇಳನವನ್ನು ಕರ್ನಾಟಕದ ಪ್ರಮುಖ ಸಾಂಸ್ಕೃತಿಕ ಕೇಂದ್ರವಾದ ಮೈಸೂರಿನಲ್ಲಿ ಏರ್ಪಡಿಸಿದ್ದೇವೆ. ಇದೊಂದು ಚರಿತ್ರಾರ್ಹವಾದ ಸಂದರ್ಭವೆಂದು ನನ್ನ ನಂಬಿಕೆ. ಈ ಚರಿತ್ರಾರ್ಹ ಸಮ್ಮೇಳನ ಸಾರ್ಥಕವಾಗಲು ಮತ್ತು ಬಹುಕಾಲ ಇದರ ಸವಿನೆನಪು ಉಳಿಯಲು ಹಲವು ಯೋಜನೆಗಳನ್ನು ರೂಪಿಸಿದ್ದೇವೆ. ಕನ್ನಡದ ಖ್ಯಾತ ಲೇಖಕರ ಮಹತ್ವದ ಕೃತಿಗಳನ್ನು ಪ್ರಕಟಿಸಿ ಸುಲಭ ಬೆಲೆಗೆ

ಒದಗಿಸುವುದು ಈ ಯೋಜನೆಗಳಲ್ಲಿ ಒಂದು. ಇದರಂತೆ ಒದುನೂರಾ ಎರಡು ಕೃತಿಗಳನ್ನು, ಹದಿನೇಳು ಸಂಕಲನಗಳನ್ನು ಆಯ್ಕೆ ಮಾಡಿ ಪ್ರಕಟಿಸುತ್ತಿದ್ದೇವೆ. ಈ ಸಾಹಿತ್ಯ ಮಾಲಿಕೆಯಲ್ಲಿ ಕವನ, ಕಾದಂಬರಿ, ನಾಟಕ, ವಿಚಾರ ಸಾಹಿತ್ಯದ ಕೃತಿಗಳಲ್ಲದೆ ಕನ್ನಡ ಸಾಹಿತ್ಯದ ಸತ್ವವನ್ನು ವೈವಿಧ್ಯವನ್ನು ಪ್ರತಿಫಲಿಸುವ ವಿವಿಧ ಬಗೆಯ ಸಂಕಲನಗಳು ಇವೆ. ಅನ್ಯ ಭಾಷಿಕರಿಗೆ ಕನ್ನಡ ಸಾಹಿತ್ಯದ ಕಂಪು ಬೀರುವಂತೆ ಕೆಲವು ಆಯ್ದ ಕೃತಿಗಳ, ಇಂಗ್ಲಿಷ್ ಭಾಷಾಂತರವನ್ನು ಕೂಡ ಪ್ರಕಟಿಸುತ್ತಿದ್ದೇವೆ. ಸಾಹಿತ್ಯ ಮಾಲೆಯ ಈ ಕೃತಿರತ್ನಗಳನ್ನು ಸಹೃದಯವಾಚಕರು ಓದಿ ಆಸ್ವಾದಿಸಿದರೆ ನಮ್ಮ ಶ್ರಮ ಸಾರ್ಥಕ ; ಸಮ್ಮೇಳನ ಅರ್ಥಪೂರ್ಣವಾಗುವುದೆಂದು ನನ್ನ ಅಭಿಲಾಷೆ.

ಈ ಕೃತಿಗಳನ್ನು ಆಯ್ಕೆಮಾಡುವಲ್ಲಿ ಸಾಹಿತ್ಯ ಸಮಿತಿಯ ಪರಿಣತ ಸದಸ್ಯರು ಸಾಕಷ್ಟು ಶ್ರಮಿಸಿದ್ದಾರೆ. ಸುದೈವದಿಂದ ಕನ್ನಡದಲ್ಲಿ ಪ್ರತಿಭಾವಂತ ಲೇಖಕರ ಅಮೂಲ್ಯ ಕೃತಿಗಳಿಗೆ ಕೊರತೆ ಇಲ್ಲ. ಈ ಹಿನ್ನೆಲೆಯಲ್ಲಿ ನಿಶ್ಚಿತ ಸಂಖ್ಯೆಯಲ್ಲಿ ಸಾಹಿತ್ಯ ಕೃತಿಗಳನ್ನು ಆಯ್ಕೆ ಮಾಡುವುದು ಸುಲಭದ ಕೆಲಸವಲ್ಲ. ಆದರೂ ಬಹುಜನರಿಗೆ ಒಪ್ಪಿಗೆಯಾಗುವಂತೆ ಸಾಹಿತ್ಯ ಸಮಿತಿ ತನ್ನ ಕರ್ತವ್ಯ ನಿರ್ವಹಿಸಿದೆಯೆಂದು ಭಾವಿಸುತ್ತೇನೆ. ಈ ಸಮಿತಿಗೆ ಕೃತಜ್ಞತೆಗಳನ್ನು ಅರ್ಪಿಸುವುದು ನನ್ನ ಕರ್ತವ್ಯ. ಈ ಕೃತಿಗಳನ್ನು ಪ್ರಕಟಿಸಲು ಅನುಮತಿ ನೀಡಿ, ಲೇಖಕರು ಉಪಕರಿಸಿದ್ದಾರೆ. ಅವರ ಉದಾರ ಉಪಕಾರವನ್ನು ಈ ಸಂದರ್ಭದಲ್ಲಿ ಕೃತಜ್ಞತಾಪೂರ್ವಕವಾಗಿ ನೆನೆಯುತ್ತೇನೆ.

ಈ ಗ್ರಂಥಮಾಲೆ ಕನ್ನಡಿಗರ ಮನಸ್ಸನ್ನು ತಟ್ಟಿ, ಹೃದಯಸ್ಪಂದನ ಮಾಡಿದರೆ ನಮ್ಮ ಸಂಕಲ್ಪಕ್ಕೆ ಸಿದ್ಧಿ ದೊರಕಿದಂತೆ. ಈ ಪ್ರಯತ್ನ 'ನಭೂತೋ' ಎಂದು ಹೆಮ್ಮೆಯಿಂದ ಹೇಳಬಲ್ಲೆ. ತಾಯಿ ಭುವನೇಶ್ವರಿ ಈ ಪ್ರಯತ್ನವನ್ನು ಹರಸಿ, ಮಂಗಳವುಂಟುಮಾಡಲೆಂದು ವಿನೀತ ಪ್ರಾರ್ಥನೆ ಸಲ್ಲಿಸುತ್ತೇನೆ.

ಆರ್. ಗುಂಡೂರಾವ್

ಮುಖ್ಯ ಮಂತ್ರಿಗಳು

# ಪರಿವಿಡಿ

# ಮೇದರಕಲ್ಲು

ಮೇದರಕಲ್ಲು !

ಆ ಹೆಸರನ್ನು ಕೇಳಿದೊಡನೆಯೇ ಆನಂದದ ಅತಿರೇಕದಲ್ಲಿ ಮೈ ಮರೆಯುತ್ತೇನೆ ! ಕೇಳಿದೊಡನೆಯೇ ತಲೆದೂಗುವ ರಸಮಾಧುರ್ಯ ಈ ಹೆಸರಿನಲ್ಲಿಲ್ಲದಿದ್ದರೂ ನನ್ನ ಪಾಲಿಗೆ ಮಾತ್ರ ರಸನೆಗೆ ಜೇನಿಳಿದಂತಾಗುತ್ತದೆ. ಕುರುಡನಾಗಲಿ, ಕುಂಟನಾಗಲಿ, ನೋಡಿದವರು ಹೇಸುವ ಕುರೂಪಿಯಾಗಲಿ ತಾಯಾದವಳಿಗೆ ಮಮತೆಯ ಕಂದನಲ್ಲವೆ ? ಹಾಗೆ ನನಗೂ ಈ ಹೆಸರು ಹಿಡಿಸಿರಬಹುದು ಎಂಬ ತತ್ತ್ವಮಾತ್ರ ಇಲ್ಲಿ ನಿರಾಧಾರವಾದುದು. ಸಂಪೂರ್ಣ ಸುಳ್ಳೆನಿಸಬಲ್ಲುದು. ಇದು ಉತ್ಪ್ರೇಕ್ಷೆಯಲ್ಲ ; ನನ್ನ ನೆಚ್ಚಿನ ಮೇದರ ಕಲ್ಲು ; ನಮ್ಮೂರಿನ ಮೂಡಣದಲ್ಲಿ ಮುಗಿಲಿನಂಚಿಗೆ ಹಣೆಲನ್ನುಜ್ಜಿ ಬೆಳೆದು ನಿಂತಿರುವ ಅಪಾರ ಗಿರಿಶ್ರೇಣಿಗಳ ನಡುವೆ ಗಜಪತಿಯಂತೆ ನಿಂತಿರುವ ಮೇದರಕಲ್ಲು ; ನಾನು ಎಲ್ಲಿದ್ದರೂ ಸ್ಮೃತಿಪಟಲದಲ್ಲಿ ತನ್ನ ಭೀಮಾಕೃತಿ ಯನ್ನು ಮೂಡಿಸಿ, ಮಂದಸ್ಮಿತನಾದ ಸ್ವಾಮಿಯಂತೆ, ನನ್ನನ್ನು ಕಂಡು, ಕರೆದು, ಹರಸಿ ಪ್ರಸನ್ನವಾಗುವ ಮೇದರಕಲ್ಲು ಓ! ಆ ಹೆಸರಿನಲ್ಲಿ ಹಸ ನಿಲ್ಲವೆ ? ರಸವಿಲ್ಲವೆ ? ಶೋಕ ತಪ್ತನಾದಾಗ, ಕಣ್ಣೊರೆಸಿ, ಮುಡಿಯನ್ನು ನೇವರಿಸಿ, "ಮಗು !" ಎಂಬ ವಾತ್ಸಲ್ಯದ ಮೃದುವಾಣಿ ತೇಲಿಬಂದು ಮೈ ದಡವುವ ಬಗೆಯಿಲ್ಲವೆ ? ಸೊಗವಿಲ್ಲವೆ ? ಇದೆ ; ಇವೆಲ್ಲವೂ ಈ ನನ್ನ ಮೇದರಕಲ್ಲಿನಲ್ಲಿವೆ . ಇದು ನನ್ನ ನೆಚ್ಚಿನ ಗಿರಿ ಹೌದು, ಶತಶತಮಾನ ಗಳಿಂದಲೂ ಜಡವಾಗಿ, ಸುಷುಪ್ತಿಯಲ್ಲಿರುವ ಒಂದು ಗಿರಿ ! ಅದೇ ನನ್ನ ಮೇದರಕಲ್ಲು !

ಮೇದರಕಲ್ಲಿಗೆ ನಾನು ಹೊಸಬನಾದರು, ಜಗತ್ತಿಗೇನೊ ಅದು ಹಳೆ ಯದೆ. ನನ್ನದು ಎಂಬ 'ಅಹಂ' ಭಾವ ನನ್ನಲ್ಲಿರಬಹುದು ; ಆದರೆ ಅದೆಷ್ಟು ಮಂದಿ ಈ ಮೊದಲೆ ಈ ಕಲ್ಲನ್ನು ಕಂಡು ಕಣ್ಮರೆಯಾಗಿಲ್ಲ ! ಅದೆಷ್ಟು ಕಾತರದ, ಕಳವಳದ, ಕಲ್ಪನೆಯ ಕಣ್ಣುಗಳು ಈ ಕಲ್ಲಿನ ಮೇಲೆ ತೆರೆಯಾಡಿ

ಕರಗಿಲ್ಲ! ಅದೆಷ್ಟು ಸಂತಸದ, ಸೌಹಾರ್ದದ, ಸಹಾನುಭೂತಿಯ ನೋಟ ನುಲಿದು ನಿರ್ನಾಮವಾಗಿಲ್ಲ. ಆ ಸಾವಿರ ಸಾವಿರ ಕಣ್ಣುಗಳ ಕಲ್ಪನೆಯೇ ನನಗಿಲ್ಲದಿರಬಹುದು; ಯಾರು ಯಾರಿಗೆ ಯಾವ ಯಾವ ವಿಧದಲ್ಲಿ ಈ ಗಿರಿ ರಮ್ಯತೆಯನ್ನು ನೀಡಿದೆಯೊ? ಯಾರಿಗೆ ಯಾವ ಕಾರಣದಿಂದ ಅದಾವ ಬಗೆಯ ಆನಂದ ತರಂಗದಲ್ಲಿ ತೇಲಿಸಿದೆಯೊ? ಆದರೆ, ಮೋದರಕಲ್ಲು ನನ್ನ ಅಂತರ್ಯಾಮವನ್ನೂ ಗೆದ್ದುಕೊಂಡಿತು. ನೆನ್ನೆ ಮೊನ್ನೆಯಿಂದಲ್ಲ. ಪುಟ್ಟ ಪುಟ್ಟ ಹೆಜ್ಜೆಯಿಡುತ್ತ, ಜಗತ್ತಿನ ಪ್ರತಿಯೊಂದು ವಸ್ತು ವಿಶೇಷವನ್ನೂ ಕಾತರತೆ ಯಿಂದ ನೋಡುವ ಬಾಲ್ಯಾವಸ್ಥೆಯಿಂದಲೂ ನನ್ನನ್ನು ಆಕರ್ಷಿಸಿತು. ಹಾಗೆ ಆಕರ್ಷಿತರಾದ ಮಂದಿ ಅದೆಷ್ಟೊ! ಅದರಲ್ಲಿ ನಾನೂ ಒಬ್ಬ. ಮೋದರಕಲ್ಲಿನ ಬಗ್ಗೆ ನನ್ನಲ್ಲಿ ಪೂಜ್ಯಭಾವನೆ ಅಂಕುರವಾದ ರಸಘಳಿಗೆ ಯಾವುದೋ ನನಗೆ ತಿಳಿಯದಿದ್ದರೂ ಚಿಕ್ಕಂದಿನಿಂದ ಅದು 'ನನ್ನ ಕಲ್ಲು' ಎಂದುಕೊಂಡೇ ಬಂದಿದ್ದೇನೆ. ಕಾಡಿನಲ್ಲಿ ನಿರರ್ಥಕವಾಗಿ ನಿದ್ರಿಸುವ ಒಂದು ಕಲ್ಲನ್ನು 'ನನ್ನದು' ಎಂದುಕೊಂಡರೆ—ಬೇಡವೆನ್ನುವವರೂ ಇಲ್ಲದೆ, ಆ 'ನನ್ನದು' ಎಂಬ ಭಾವನೆ ಕುಡಿ ಚಾಚಿ ಬೆಳೆದು, ಈಗ ಮಹಾವೃಕ್ಷವಾಗಿದೆ; ನನ್ನೆದೆಯ ಬಯಲಿನಲ್ಲಿ.

ನಮ್ಮೂರ ದೇವಾಲಯದ ಮುಂದೆ ನಿಂತು, ಮೂಡಣಕ್ಕೆ ಕಣ್ಣು ಹೊರ ಳಿಸಿದರೆ, ಮೊದಲು ದೇವರ ಹೊಲ ಸಿಕ್ಕುತ್ತದೆ. ನೆರೆಯಲ್ಲಿಯೇ ಆರೇಳು ಹಿಪ್ಪೆಯ ಮರಗಳು ವಿಶಾಲವಾಗಿ ಕೊಂಬೆರೆಂಬೆಗಳನ್ನು ಚಾಚಿ ದಾರಿಹೋಕರಿಗೆ ನೆರಳಿನ ಅಮೃತದಲ್ಲಿ ಮೀಯಿಸಲು ತಾಯಿಗೋವಿನ ಕೆಚ್ಚಲಿನಂತೆ ಕವಿದು ಕೊಂಡಿವೆ. ಈ ನೆರಳಿನಲ್ಲಿಯೇ ಒಂದು ಬಂಡಿಯ ಜಾಡು ಹರಿಯುತ್ತದೆ. ಹಿಪ್ಪೆಯ ಮರಗಳು ಹಿಂದೆ ಹೋದ ಮೇಲೆ, ಬಂಡಿಯ ಜಾಡಿಗೆ ಅಡ್ಡಲಾಗಿ ಗುಡ್ಡವೊಂದು ಸಿಕ್ಕುವುದರಿಂದ ಅದು ಬಲಕ್ಕೆ ತಿರುಗಿ ಬಳಸಿಕೊಂಡು ಬರು ತ್ತದೆ. ಕಾಲುನಡಗೆಯವರಾದರೆ ಕಟ್ಟೆಯೊಂದರ ನೆರೆಯಲ್ಲಿ ಕರಿಯ ಕಲ್ಲಿನ ಗುಡ್ಡವನ್ನೇರುವ ದಾರಿಯಲ್ಲಿ ಸಾಗಬೇಕು. ಮುಂದೆ ಈ ಬೆಟ್ಟವನ್ನಿಳಿದು, ಅಲ್ಲಿರುವ ಕಣಿವೆಯಲ್ಲಿ ಕವಣೆಯ ಕಲ್ಲಿನ ದೂರವನ್ನು ನಡೆದರೆ, ಮೋದರಕಲ್ಲಿನ ತಪ್ಪಲು ಅಲ್ಲಿಯೇ ಸಿಕ್ಕುತ್ತದೆ. ಹಿಂದೆ ಬಲಕ್ಕೆ ತಿರುಗಿದ್ದ ಬಂಡಿಯ ಜಾಡು ಮತ್ತೆ ನಮ್ಮ ಜೊತೆಗೆ ಬರುತ್ತದೆ.

ಎತ್ತಿನ ಗಾಡಿಯಲ್ಲಿ ಪ್ರಯಾಣಮಾಡುವುದೆಂದರೆ ಹಳ್ಳಿಯ ಮಕ್ಕಳಿಗೆ ಅಪಾರ ಆಸೆಯಿರುತ್ತದೆ. ಈ ಆಸೆ ನನಗೂ ಇದ್ದಿತು. ಚಿಕ್ಕವನಾಗಿದ್ದಾಗ, ನಮ್ಮ ಹೊಲಕ್ಕೆ ಗೊಬ್ಬರವನ್ನು ತುಂಬಿಕೊಂಡು ಹೋಗುವ ಗಾಡಿಯಲ್ಲಿ, ಗೊಬ್ಬರದ ರಾಶಿಯ ಮೇಲೆ ಠೀವಿಯಿಂದ ಕುಳಿತು ಹೋಗುವ ಚಪಲ. ಬೆಟ್ಟದಾಚೆಯ ಹೊಲಗಳಿಗೆ ಗೊಬ್ಬರವನ್ನು ಸಾಗಿಸಲು ಗಾಡಿ ಕೆಲವು ಬಾರಿ ಮೇದರಕಲ್ಲಿನ ಮುಂದೆಯೂ ಹೋಗಬೇಕಾದ ಸಂದರ್ಭಗಳು ಬರುತ್ತಿದ್ದವು. ಕರಿಯಕಲ್ಲನ್ನು ದಾಟಿ, "ಗಡ್....ಗಡಕ್ .. ಗಡಕ್" ಎಂದು ತನ್ನದೇ ಆದ ಧ್ವನಿಯಲ್ಲಿ ಏನನ್ನೋ ಜಪಿಸುತ್ತ ದಾರಿಯಲ್ಲಿ ಮಲಗಿದ ಹಾಸುಗಲ್ಲು ಗಳನ್ನು ಬಡಿದೆಬ್ಬಿಸುತ್ತ ಸಾಗುವಾಗ, ನನ್ನ ಕಣ್ಣು ಎದುರಿಗೆ ಭಯಂಕರ ವಾಗಿ ಬೆಳೆದುನಿಂತಿರುವ ಮೇದರಕಲ್ಲಿನ ಮೇಲೆ ಹರಿದು, ಎದೆಯನ್ನು 'ಜುಂ' ಎನ್ನಿಸುತ್ತಿತ್ತು. ನಮ್ಮ ಎದುರುಮನೆಯ ಅಯ್ಯ ಹೇಳುತ್ತಿದ್ದ ರಾಕ್ಷಸರ ಕತೆಗಳಲ್ಲಿ ಬರುವ ವಿಚಿತ್ರರೂಪಿನ ರಾಕ್ಷಸರನ್ನು ನೆನೆಸಿಕೊಂಡು, ಈ ಬೆಟ್ಟ ದಲ್ಲಿಯೂ ಆ ರೂಪವನ್ನು 'ಕಂಡ ಅನುಭವವಾಗುತ್ತಿತ್ತು ನನಗೆ. ಅದು ಆ ದೊಡ್ಡ ಬಂಡೆ ರಾಕ್ಷಸನ ಪೇರೊಡಲು. ಮೇಲಿರುವುದು ಅವನ ಭೂತಾಕಾರದ ತಲೆ, ಅಕ್ಕಪಕ್ಕದ ಸಂದುಗಳೇ ತುಟಿಗಳು, ಕತ್ತಲು ತುಂಬಿದ ಗವಿಯೇ ಆಳ ವಾದ ಬಾಯಿ. ನೆರೆಯ ಬಂಡೆಗಳು ಅವನ ಬಾಹುಗಳು...ಓಹೋ ರಾಕ್ಷಸ! ಒಮ್ಮೆ ಬೆಚ್ಚಿದಂತಾಗುತ್ತಿತ್ತು. ಚೀತರಿಸಿಕೊಂಡು ಗಾಡಿಯ ತಡಿಕೆಯನ್ನು ಭದ್ರವಾಗಿ ಹಿಡಿದುಕೊಳ್ಳುತ್ತಿದ್ದೆ.

ಗಾಡಿ ಮುಂದೆ ಹೋದಂತೆಲ್ಲಾ ಕಲ್ಲು ಹಿಂದೆ ಹಿಂದೆ ಸರಿಯುತ್ತಿತ್ತು. ಆಗ ನನ್ನನ್ನೇ ಎವೆಯಿಕ್ಕದೆ ನೋಡುತ್ತಿದೆಯೋ ಎನ್ನುವ ಅನುಭವವಾಗುತ್ತಿತ್ತು. ಗಾಡಿ ಹೋದ ಕಡೆಗೇ ಅದೂ ತಿರುಗುತ್ತಿದ್ದಂತೆ ತೋರುತ್ತಿತ್ತು. ತಗ್ಗಿದ ದೃಷ್ಟಿಯಲ್ಲಿ ಸ್ವಲ್ಪ ಮುಂದೆ ಬಂದ ಬಳಿಕ ಮತ್ತೆ ಕಲ್ಲಿನ ಕಡೆ ತಿರುಗುತ್ತಿದ್ದೆ. ಆಗ ಕಲ್ಲು ನನ್ನನ್ನು ಕಂಡು ನಕ್ಕಂತಾಗುವುದು. ನಾನು ಬೆಚ್ಚಿ ಮತ್ತೆ ಮುಂದೆ ತಿರುಗಿಬಿಡುವೆ

ಈ ಭಯ ಬಹಳ ದಿನ ನಿಲ್ಲಲಿಲ್ಲ. ಲೆಕ್ಕವಿಲ್ಲದಷ್ಟು ಬಾರಿ ಈ ಕಲ್ಲಿನ ಮುಂದೆ ಪ್ರಯಾಣಮಾಡಿ, ಕಲ್ಲಿನ ಆಕಾರ ಕಣ್ಣಿಗೊಗ್ಗಿದಂತೆಲ್ಲ ಭಯದ ಛಾಯೆ ಕರಗುತ್ತ ಬಂದಿತು. ರಾಕ್ಷಸನಂತೆ ಕಾಣುತ್ತಿದ್ದ ಕಲ್ಲು ದಿನ

ಕಳೆದಂತೆ ನನ್ನ ಪ್ರೀತಿ, ಮಮತೆ, ಪ್ರೇಮಗಳನ್ನು ಸೆಳೆಯತೊಡಗಿತು. ಅದಾವ ಅದ್ಭುತ ಆಕರ್ಷಕಶಕ್ತಿ ಈ ಕಲ್ಲಿನಲ್ಲಿತ್ತೋ ನನಗೆ ಅರ್ಥವಾಗಲಿಲ್ಲ. ದಿನವೂ ಒಂದಲ್ಲ ಒಂದು ಕಾರಣದಿಂದ ಮೇದರಕಲ್ಲಿನ ಬಳಿಗೆ ಹೋಗಿಬರುವ ಹಂಬಲು ದಿನ ಬಲಿತಂತೆ ಹೆಚ್ಚಾಯಿತು. ಕೊನೆಗೂ ಮೇದರಕಲ್ಲು ನನ್ನ ಹೃದಯವನ್ನು ಗೆದ್ದಿತು.

'ಪ್ರೀತಿ', 'ಮಮತೆ', 'ಪ್ರೇಮ' ಗಳನ್ನು ಸೆಳೆಯತೊಡಗಿತು ಈ ನನ್ನ ಮೇದರಕಲ್ಲು ಎಂದರೆ ಕೆಲವರು 'ಪ್ರೀತಿ', 'ಮಮತೆ', 'ಪ್ರೇಮ' ಎಂಬ ಪದಗಳನ್ನು ನಿರ್ಜೀವ ವಸ್ತುವಿಗೂ ಉಪಯೋಗಿಸಿದ್ದಾನೆ—ಎಂದು ಮೂಗು ಮುರಿಯುವವರೂ ಇರಬಹುದು. ಮುದ್ದಾದ ಮೇಕೆಯ ಮರಿಯನ್ನೋ, ಕರುವನ್ನೋ, ಮುಗ್ಧಶಿಶುವನ್ನೋ ಪ್ರೀತಿಯಿಂದ ಎದೆಗಪ್ಪಿ ತಣಿಯಬಹುದು; ಒಲವಿನ ಹೆಣ್ಣನ್ನೋ, ಚೆಲುವಿನ ನಗರವನ್ನೋ, ನಾಲಗೆ ಎಳಸಿದ ತಿಂಡಿಯನ್ನೋ ಪ್ರೀತಿಸಬಹುದು; ಬಯಸಿ ಬಾಯಾರಬಹುದು. ಸಾಕಿಸಲಹಿದ ಮಾತೆಯನ್ನೋ ವಿಷಮ ಸನ್ನಿವೇಶಗಳಲ್ಲಿಯೂ ದುಡುಕದ ತಜ್ಞರನ್ನೋ ಸದ್ಗುಣಿಗಳನ್ನೋ ಕರ್ಮಯೋಗಿಗಳೆನಿಸಿದ ಸಾಧುಜೀವಿಗಳನ್ನೋ ಹಿತಚಿಂತಕರನ್ನೋ—ಮಮತೆ ಯಿಂದ ಕಾಣಬಹುದು; ಭಕ್ತಿಯಿಂದ ಮಣಿಯಬಹುದು; ಆದರೆ, ಇದು ಮೇದರ "ಕಲ್ಲು"!" ಬಿಸಿಲು ಮಳೆ ಚಳಿಗಳಿಗೂ ಲೆಕ್ಕಿಸದೆ ಸೊಕ್ಕಿ ನಿಂತ ಬಂಡೆ ಗಳ ಗುಂಪು. ರೂಪಿಲ್ಲದ, ನಯವಿಲ್ಲದ, ನುಡಿಯಿಲ್ಲದ ಒಂದು ನಿಷ್ಪ್ರಯೋಜಕ ಹೆಬ್ಬೆಟ್ಟದ ತುಂಡು. ಇದರ ಮೇಲೆ ಇವನ 'ಪ್ರೀತಿ–ಮಮತೆ–ಪ್ರೇಮ' ಎಂದು ವ್ಯಂಗ್ಯ ನಗೆಯ ಹೊಗೆಯನ್ನಾದರೂ ಉಗುಳಬಹುದು. ಏನಾದರೇನು! ಮೇದರಕಲ್ಲಿಗೂ ಹೃದಯವಿರುವುದನ್ನು ನಾನು ಅರಿತಿದ್ದೇನೆ. ಅದರಲ್ಲಿಯೂ ಚೆಲುವಿದೆ; ಒಲವಿದೆ. ನಮ್ಮಿಬ್ಬರ ಹೃದಯಗಳೆರಡನ್ನೂ ಮಧುರ ಬಾಂಧವ್ಯ ಹೊಲೆದಿದೆ, ಹೊಸೆದಿದೆ. ಇದು ಸಟೆಯೆ? ಇಲ್ಲ....ಖಂಡಿತವಾಗಿಯೂ ಸುಳ್ಳಲ್ಲ. ಸೌಂದರ್ಯದ ರಸದೌತಣವನ್ನೆರೆಯುವ ಅಪೂರ್ವ ಸಂಪತ್ತನ್ನು ಈ ನನ್ನ ಮೇದರಕಲ್ಲು ಗಳಿಸಿಕೊಂಡಿರುವಾಗ ಹೇಗೆ ಸುಳ್ಳೆನ್ನುವಿರಿ? ನೀವು ಏನೆಂದರೂ ಎನ್ನಿ; ನನ್ನ ದೃಷ್ಟಿಯಲ್ಲಿ ಇದು ಕಲ್ಪವೃಕ್ಷ! ಕಾಮಧೇನು!!

ಇಷ್ಟು ಅತಿಶಯದ ಕಲ್ಲೆಂದ ಮೇಲೆ ಅದಕ್ಕೊಪ್ಪುವ ಒಂದು ಒಳ್ಳೆಯ ಹೆಸರಾದರೂ ಇರಬಾರದಿತ್ತೆ—ಎನ್ನಿಸಬಹುದು. ಎಷ್ಟೋ ವರ್ಷಗಳ ಹಿಂದೆಯೇ

ರೂಢಿಯಲ್ಲಿದ್ದ ಈ ಹೆಸರು ಈಗಲೂ ಸ್ವಲ್ಪವೂ ತಾರತಮ್ಯವನ್ನು ಹೊಂದದೆ ಉಳಿದು ಬಂದಿದೆ. ಪುರಾತನವಾದ ಹೆಸರನ್ನು ಅಳಿಸಿ ಆಧುನಿಕವಾಗಿ, ಕೃತಕವಾದ ಹೆಸರನ್ನು ನನ್ನ ಮೇದರಕಲ್ಲಿನಂಥ ನಿರಾಡಂಬರ ವಸ್ತುವಿಗೇಕಿಡಬೇಕು! ಬರಿಯ ಹೆಸರಿನಲ್ಲಾದರೂ ಏನಿದೆ? ತನ್ನಲ್ಲಿರುವ ಘನತೆ, ಗೌರವಗಳು ಆ ಹೆಸರಿನ ಮೌಲ್ಯವನ್ನು ಹೆಚ್ಚಿಸುವುದಷ್ಟೇ ಅಲ್ಲ—ಆ ಹೆಸರನ್ನು ಎಲ್ಲರೂ ಬಯಸುವಷ್ಟು ಕಿವಿಗಿಂಪಾಗಿಸುತ್ತವೆ. ಮೇದರಕಲ್ಲಿಗೆ ಘನತೆ, ಗೌರವಗಳೆರಡೂ ಇವೆ. ಜೊತೆಗೆ ಇತಿಹಾಸದ ದೃಷ್ಟಿಯಿಂದಲೂ ಈ ಹೆಸರಿಗೆ ಪುಷ್ಟಿಯಿದೆ.

ನಾಗಮಂಗಲ ತಾಲ್ಲೂಕಿನಲ್ಲಿ ಪ್ರಸಿದ್ಧವಾಗಿರುವ ಶ್ರೀ ಆದಿಚುಂಚನ ಗಿರಿಯ ಮೇಲೆ ಆಗ ಬಿದಿರು ಮೆಳೆಗಳು ವಿಪುಲವಾಗಿದ್ದುವಂತೆ. ಬಿದಿರನ್ನರಸುತ್ತ ಬಂದ ಮೂವರು ಮೇದರು ಬೆಟ್ಟವನ್ನೇರಿ, ಮೆಳೆಯೊಂದರಲ್ಲಿ, ಬಿದಿರೊಂದಕ್ಕೆ ಮಚ್ಚನ್ನು ಬೀಸಿದಾಗ, ಪ್ರಾಣಿಯೊಂದನ್ನು ಹನನಮಾಡಿದಂತೆ, ನೆತ್ತರು 'ಚಿಲ್ಲ'ನೆ ಹೊರಹೊಮ್ಮಿತು. ಆಶ್ಚರ್ಯ ಭಯಗಳೆರಡೂ ಅವರಲ್ಲುಂಟಾಗಿ ನಡುಗುತ್ತ ನಿಂತಾಗ "ಹಿಂದಿರುಗಿ ನೋಡದೆ ಹೊರಟುಹೋಗಿ—ನೋಡಿದರೆ ರಕ್ತಕಾರಿ ಸತ್ತೀರಿ .." ಎಂಬ ಎಚ್ಚರಿಕೆಯ ಅಶರೀರವಾಣಿ ಎತ್ತಣಿಂದಲೋ ಕೇಳಿಬಂದು ಆ ಮೂವರು ಅಲ್ಲಿಂದ ಸರಸರನೆ ಹೊರಟುಬಿಟ್ಟರು. ದುರ್ಬಲವಾದ ಅವರ ಮನಸ್ಸಿನಲ್ಲಿ ಹಿಂದಿರುಗಿ ನೋಡಬಾರದೆಂಬ ಛಲ ಉಳಿಯಲಿಲ್ಲ. ಸುಮಾರು ಎರಡು ಮೈಲಿಗಳವರೆಗೂ ಬಂದವರು, ನೋಡಿಯೇ ಬಿಡಬೇಕೆಂದು ನಿಶ್ಚಯಿಸಿ, ಅಲ್ಲೇ ಸಮೀಪದಲ್ಲಿ ಎತ್ತರವಾದ ಬಂಡೆಯೊಂದನ್ನೇರಿ, ಅತ್ತ ನೋಡಿದರು. ಅದೇನಾಯಿತೊ! ಮೂವರೂ ರಕ್ತಕಾರಿ ಮೇಲಿನಿಂದ ಕೆಳಗಿದ್ದ ಹಾಸುಬಂಡೆಯ ಮೇಲಕ್ಕೆ ಉರುಳಿಬಿದ್ದರು. ಬಿದ್ದ ರಭಸಕ್ಕೆ ಉಂಟಾದ ಮಂಡಿ ಮೊಳಕೈಗಳ 'ಊರು' (ಗುರುತು) ಈಗಲೂ ಆ ಬಂಡೆಯ ಮೇಲಿದೆ. ಕಲ್ಲಿನ ಮೇಲೆ ಗುಳಿಬೀಳಲು ಅವರೇನು ಉಕ್ಕಿನ ಮನುಷ್ಯರೇ? ಕಲ್ಲು ಅಷ್ಟು ಮೆದುವಾಗಿತ್ತೆ? ಎಂದು ನೀವು ಅಚ್ಚರಿಪಡುವುದಿರಲಿ, ಹೇಳುತ್ತಿರುವ ನಾನೇ ಮೊದಲಬಾರಿಗೆ ಕಂಡಾಗ ಬೆರಗಾಗಿದ್ದೇನೆ. ಈಗ ಚುಂಚನಗಿರಿ ಶ್ರೀ ಆದಿಚುಂಚನ ಗಿರಿಯಾಗಿದೆ, ಒಂದು ಪವಿತ್ರವಾದ ಯಾತ್ರಾಸ್ಥಳವೆನಿಸಿದೆ. ಇಲ್ಲಿ ಈ ಮೂವರು ಮೇದರ ತಲೆಗಳನ್ನು ಹಂತಗಳ ಮೇಲೆ ಈಗಲೂ ಇಟ್ಟಿದ್ದಾರೆ! ಈ ಮೇದರು

ಕಡಿದ ಕುರುಹು, ಆ ಬಿದಿರಿನ ಎಡೆಯಲ್ಲೇ ಒಡಮೂಡಿದ ಶ್ರೀ ಲಿಂಗದ ಎಡಪಾರ್ಶ್ವದಲ್ಲಿರುವುದನ್ನು ಭಕ್ತಾದಿಗಳು ಕಾಣುತ್ತಿದ್ದಾರೆ. ಅದು ಕತೆಯೊ ಕಲ್ಪನೆಯೋ! ಅಂತು, ಸನ್ನ ಈ ಕಲ್ಲಿಗೆ ಹೆಸರು ಉಳಿದಿದೆ. ಹೇಗೂ ಸ್ಥಳಪುರಾಣದ ದೃಷ್ಟಿಯಿಂದಲೂ ಇದಕ್ಕೆ ಮಹತ್ವ ದೊರೆತದ್ದನ್ನು ಕಂಡು ಹಿಗ್ಗಿದ್ದೇನೆ.

ಮೇದರಕಲ್ಲು ತನ್ನ ಸುತ್ತಲೂ ಸಣ್ಣ ಸಣ್ಣ ಬೆಟ್ಟಗುಡ್ಡಗಳ ಪರಿವೇಷವನ್ನು ರಚಿಸಿಕೊಂಡಿದ್ದರೂ, ವಿಸ್ತಾರವಾದೊಂದು ಹುಲ್ಲು ಬಯಲಿನ ಮೇಲೆಯೇ ತಾನು ಎಡೆಮಾಡಿಕೊಂಡಿದೆ. ತನ್ನ ಹಸಿರು ಬಾಹುಗಳಿಂದ ಭೂಮಾತೆ ಮೇದರ ಕಲ್ಲನ್ನು ಆಲಂಗಿಸಿಕೊಂಡಿದ್ದಾಳೆ. ಕಲ್ಲಿನಿಂದ ಇಪ್ಪತ್ತು ಮೂವತ್ತು ಗಜಗಳಷ್ಟು ಮುಂದೆ ಒಂದು ತಿಳಿಗೊಳವೂ ಇದೆ. ಸಣ್ಣ ಸಣ್ಣ ಗಿಡಮರಗಳೂ, ಹಳ್ಳಕೊರಕಲುಗಳೂ ಅಲ್ಲಲ್ಲಿ ಉಚಿತವರಿತು ಮೂಡಿಕೊಂಡಿವೆ. ಇಂಥ ದಿವ್ಯ ಸೌಂದರ್ಯದ ಮಡಿಲಲ್ಲಿ ದನ ಕುರಿಗಳನ್ನು ಮೇಯಿಸುವುದಕ್ಕಾಗಿ ಈ ಸುತ್ತಿನ ಹಳ್ಳಿಯವರೆಲ್ಲ ಬರುತ್ತಾರೆ. ಮಳೆಗಳೊಡನೆ ಮೇಕೆಗಳು ಮೇಳವನ್ನಾರಂಭಿಸಿದರೆ, ದನಕರುಗಳು ಸೊಂಪಾಗಿ ಬೆಳೆದ ಹಸಿರಿನ ಮೇಲೆ ತೇಲುಬಿಟ್ಟ ಕಾಗದದ ಗೊಂಬೆಗಳಂತೆ ಮೇಯುತ್ತಿರುತ್ತವೆ. ಕಾಯಲು ಬಂದವರು ಮೇದರ ಕಲ್ಲನ್ನೇರಿ, ಅದರ ತುದಿಯಲ್ಲಿ ಸತ್ತಿಗೆಯಂತಿರುವ ಕಾಡುಗಳ್ಳಿಯ ನೆರಳಿನಲ್ಲಿ ಕುಳಿತು ಕೇಕೆ ಹಾಕುವುದನ್ನು ಮಿಕ್ಕ ಆ ಸ್ವರ್ಗವಿನ್ನಾವುದು?

ಮೇದರಕಲ್ಲಿನ ಮುಂದೆ ನಿಂತು ಮೇಲೆ ಆನಂದತನ್ಮಯರಾದ ದನಗಾಹಿಗಳನ್ನು ನೋಡಿದ ನಾವು—ಆಗಿನ್ನೂ ಚಿಕ್ಕವರಾದುದರಿಂದ—ಆ ಉನ್ನತ ಗಿರಿಯನ್ನೇರಿ ನಲಿಯುವ ಭಾಗ್ಯವನ್ನು ದೇವರು ಕರುಣಿಸಲಿಲ್ಲವಲ್ಲ ಎಂದು ಮರುಗಿ ಕೊರಗಿ, ಮೇದರಕಲ್ಲಿನ ಮುಡಿಯೇರಿ, ಅಲ್ಲಿಂದ ಪ್ರಕೃತಿಯನ್ನು ನೋಡಿ ನಲಿಯುವ ದಿನವೆಂದು ಬಂದೀತು ಎಂದು ಕಾತರತೆಯಿಂದ ನಿರೀಕ್ಷಿಸುತ್ತಿದ್ದೆವು. ಸಣ್ಣ ಮಕ್ಕಳಿನ್ನೂ ಅನನುಭವಿಗಳು, ತುಂಟರು. ನನ್ನ ಮೇಲೇರಿ ಅಪಾಯಕ್ಕೀಡಾಗಿಯಾರು ಎಂಬ ಭಾವನೆಯಿಂದಲೋ ಏನೋ ಮೇದರಕಲ್ಲು ಸಣ್ಣವರು ತನ್ನ ಬೆನ್ನೇರುವ ಅವಕಾಶವನ್ನು ಕಲ್ಪಿಸಿಲ್ಲ. ಬಹು ಎತ್ತರದಲ್ಲಿ ಕುಳಿತು ತಮ್ಮದೇ ಆದ ಕವನಗಳನ್ನು ಸೃಜಿಸಿಕೊಂಡು ಗಿರಿಕಂದರಗಳೇ ಮೋಹ

ಮುಗ್ಧವಾಗುವಂತೆ ಅಭಿನಯಿಸುತ್ತ ಕೂಗಿ ಕುಣಿಯುವ ದೊಡ್ಡವರನ್ನು—ದನ ಕಾಯಲು ಬರುತ್ತಿದ್ದವರು ಹತ್ತು, ಹನ್ನೆರಡು ವರ್ಷಗಳನ್ನು ದಾಟಿದವರು— ನೋಡಿದಾಗಲೆಲ್ಲ ಕೆಳಗೆ ನಿಂತ ನಮ್ಮ ಮನಸ್ಸು ಮಿಲಮಿಲ ಎನ್ನುತ್ತಿತ್ತು. ಯಾವುದೋ ಅಪೂರ್ವ ಲೋಕದಲ್ಲಿ ಅವರಿದ್ದು ವಿಹರಿಸುತ್ತಿದ್ದಾರೆ ಎನಿಸುವ ನಮ್ಮ ಮನಸ್ಸಿನಲ್ಲಿ ಉತ್ಸಾಹದ ಎಲ್ಲೆಯೊಡೆದು ದಿನನಿತ್ಯವೂ ಮೇದರ ಕಲ್ಲನ್ನೇರುವ ಪ್ರಯತ್ನಮಾಡಿ ಲೆಕ್ಕವಿಲ್ಲದಷ್ಟು ಬಾರಿ ವಿಫಲರಾಗಿದ್ದೇವೆ. ದೊಡ್ಡವರ ಹಾಸ್ಯಕ್ಕೆ ಗುರಿಯಾಗಿ ವಿಮುಖರಾಗಿದ್ದೇವೆ. ಅವರನ್ನು ಎಷ್ಟೇ ಕೇಳಿಕೊಂಡರೂ ಮೇಲಕ್ಕೆ ನಮ್ಮನ್ನು ಕರೆದುಕೊಳ್ಳುತ್ತಿರಲಿಲ್ಲ. ಇದರಿಂದಾಗಿ ಅವರ ಮೇಲೆ ಕೆಲವು ಬಾರಿ ಅಸೂಯೆಯೂ ಮೂಡುತ್ತಿತ್ತು.

ಕೊನೆಗೂ ನಮ್ಮ ಕನಸಿನ ದಿನಗಳು ಕಣ್ಣು ತೆರೆದವು. ಇತರರಂತೆ ನಾವೂ ಮೇದರಕಲ್ಲನ್ನೇರುವ ಚೈತನ್ಯ ಒಮ್ಮೆ ತಾನಾಗಿಯೇ ಮೂಡಿಬಂದಿತು. ಮೇದರ ಕಲ್ಲಿನ ಹಿಂಭಾಗದಲ್ಲಿರುವ ಮರಿಬಂಡೆಗಳ ಸಂದಿನಲ್ಲಿ ನುಸುಳಿ, ಮುಂದಿರುವ ಕಾರೆಯ ಮೆಳೆಗಳ ಕೆಲದಲ್ಲಿರುವ ಸಣ್ಣ ಓಣಿಯಾಕಾರದ ದ್ವಾರ ಒಂದರಲ್ಲಿ ತೆವಳಿಕೊಂಡು ಹೋದರೆ, ಅಲ್ಲಿಯೇ ಕಡಿದಾದ ಮತ್ತೊಂದು ಬಂಡೆ ಸಿಕ್ಕುತ್ತದೆ. ಹೆಜ್ಜೆಹೆಜ್ಜೆಗೆ ಎಚ್ಚರಿಕೆಯನ್ನು ವಹಿಸುತ್ತ ಕೈಕಾಲುಗಳಿಗೆ ಹೇರಳವಾದ ಶಕ್ತಿಯನ್ನು ಕಲ್ಪಿಸುತ್ತ ಬಂಡೆಯನ್ನೇರಿದರೆ, ಮತ್ತೆರಡು ಬಂಡೆಗಳು ಒಂದನ್ನೊಂದು ಅಗಲಿನಿಂತ ಎಡೆ ದೊರೆಯುತ್ತದೆ. ಚಿಕ್ಕ ಹುಡುಗರು ವಿಫಲರಾಗುತ್ತಿದ್ದ ಸ್ಥಳವೇ ಇದು. ಇದನ್ನು ಹಾರಿ ಮುಂದಿನ ಬಂಡೆಯನ್ನು ಸೇರಿದರೆ ನಂತರ ಮೇದರಕಲ್ಲಿನ ಹೆಬ್ಬಾಗಿಲನ್ನು ದಾಟಿದಂತೆಯೇ ಸರಿ. ಇಲ್ಲಿಯವರೆಗೂ ಬಂದು, ಲೆಕ್ಕವಿಲ್ಲದಷ್ಟು ಬಾರಿ ನಿರಾಶರಾಗಿ ಹಿಂದಿರುಗಿದ ನಾವು ಒಂದು ದಿನ ಇದ್ದಕ್ಕಿದ್ದಂತೆಯೇ ಸ್ಫೂರ್ತಿ ಬಂದು, ಉಸಿರುಕಟ್ಟಿ, ಧೈರ್ಯಮಾಡಿ, ಛಂಗನೆ ಹಾರಿ ಮುಂದಿನ ಕಲ್ಲನ್ನು ಹಿಡಿದುಕೊಂಡೆವು. ಹೀಗೆ ಹಾರುವಾಗಲೇ ನನ್ನ ಮೊದಲನೆಯ ಟೋಪಿ ಗವಿಯ ಬಾಯಿಗೆ ತುತ್ತಾದುದು. ಬಂಡೆಯನ್ನೇರುವುದು ಅಷ್ಟೇನು ಸುಲಭದ ಮಾತಲ್ಲ. ನನ್ನಂಥ ನಾಲ್ಕು ಜನ ಹುಡುಗರು ಅಂದು ಮೇದರಕಲ್ಲನ್ನು ಏರಿ ನಿಂತಾಗ ಎದೆ ಹೊಡೆದುಕೊಳ್ಳತೊಡಗಿತು. ಎಂಥ ಅಪೂರ್ವ ಸಾಹಸ ನಮ್ಮದು ಎಂಬ ಹೆಮ್ಮೆಯಿಂದ ಮುಖದ ಬೆವರನ್ನು

ವರೆಸಿಕೊಂಡೆವು. ಹಸಿದ ಗೋವು ಹುಲುಸಾಗಿ ಬೆಳೆದ ಫಸಲನ್ನು ನೋಡಿ — ಆಸೆ ಆತುರಗಳ ಒತ್ತಡದಲ್ಲಿ ಪಯಿರನ್ನು ಸಿಕ್ಕಿದಂತೆಲ್ಲ ಕಿತ್ತು ತಿನ್ನುವ ಹಾಗೆ, ನಾವು ಮೇದರಕಲ್ಲಿನ ಉತ್ತುಂಗ ಶಿಖರವನ್ನು ಸೇರಿದ ಮೇಲೆ 'ಗೆದ್ದೆವು—ಗೆದ್ದೆವು' ಎಂಬಂತೆ ಮೇಲೆಲ್ಲಾ ಕುಣಿದು ಕುಪ್ಪಳಿಸಿದೆವು. ಮೇದರಕಲ್ಲಿನ ಮೇಲೆ ನಮ್ಮ ನಲಿವು, ಒಲವುಗಳನ್ನು ಕಂಡು ಕೆಳಗಿದ್ದ ಪ್ರಾಣಿಗಳೆಲ್ಲ "ನಮಗೂ ಅಲ್ಲಿಗೆ ಹತ್ತುವ ಶಕ್ತಿಯಿದ್ದಿದ್ದರೇ!" ಎಂದು ಜೊಲ್ಲು ಸುರಿಸುತ್ತಿವೆಯೋ ಎನಿಸಿತು ನಮಗೆ. ಮೇದರಕಲ್ಲಿನ ತುತ್ತತುದಿಯಲ್ಲಿ ನಮ್ಮಂತೆಯೇ ಮೇಲೇರಿ ನರ್ತಿಸಲು ಒಯ್ಯೊಯ್ಯನೆ ತೀಡಿಬಂದ ಮಂದಾನಿಲ, ಕಚಗುಳಿ ಇಡುವಾಗ, ಅಲ್ಲಿಗೆ ಕಾಣುವ ರಮಣೀಯ ನೋಟ ಮೈಮರೆಸುವಂತಿರುವಾಗ, ಉಲ್ಲಾಸದ ಸೀಮೋಲ್ಲಂಘನಮಾಡಿ ಮೆರೆದೆವೆಂದರೆ ಅತಿಶಯವಲ್ಲ!

'ಹುಡುಗರು ಮೇದರಕಲ್ಲಿಗೆ ಹತ್ತಿದರು' ಎಂಬ ವಾರ್ತೆಯೂ ಊರಿಗೆ ಮುಟ್ಟಿತು. ಅಂದು ರಾತ್ರಿಯೇ ನಮಗೆಲ್ಲ ಕಠಿಣ ಶಿಕ್ಷೆ. "ಅಂಥ ಅಪಾಯ ಕಾರಿ ಕಲ್ಲನ್ನೇರಿ ಕಾಲನ್ನೊ ಕೈಯನ್ನೋ ಮುರಿದುಕೊಂಡರೆ ಏನು ಗತಿ!" ಎಂದು ಮನೆಯವರು ಕೆರಳಿ ಕೆಂಡವಾದರು. ಆದರೇನು, ಹುಡುಗುತನದ ಉತ್ಸಾಹ. ನಮ್ಮೊಡನೆ ಕಲ್ಲಿಗೆ ಬಂದು ತಡೆಯಲು ಅವರಿಗಾಗಲೇ ಇಲ್ಲ, ಇತರರು ಕಂಡಂತೆಯೋ ಕಾಣದಂತೆಯೋ ಮೇದರಕಲ್ಲನ್ನೇರಿಬಿಡುತ್ತಿದ್ದೆವು. ಅಲ್ಲಿ ನಮ್ಮ ರಾಜ್ಯವನ್ನು ಕಟ್ಟಿ, ರಾಜ, ಮಂತ್ರಿ, ಸೇನಾಧಿಪತಿಗಳಾಗಿ ದರ್ಪ ದಿಂದ ಪೀಠಾರೂಢರಾಗಿ, ಬಯಲು ನಾಟಕದಲ್ಲಿ ಅಲ್ಲಿ ಇಲ್ಲಿ ಕೇಳಿದ್ದ ಮುರುಕು ಹಾಡುಗಳನ್ನೇ ನಮ್ಮ ಭಾಷೆಗೆ, ನಮ್ಮ ಕಂಠಕ್ಕೆ ಪರಿವರ್ತಿಸಿಕೊಂಡು—ರಾಜ್ಯಪರಿಪಾಲನೆಗೆ ತೊಡಗುವೆವು. ಇಷ್ಟೇ ಅಲ್ಲ. ಮೇದರಕಲ್ಲಿನ ಮೇಲೆ ನಾವು ಆಡದ ಆಟವಿಲ್ಲ. ಒಮ್ಮೆ ನಾನು, ದೇವೇಂದ್ರನಾಗುತ್ತಿದ್ದೆ. ಪರಮೇಶ್ವರ, ವಿಷ್ಣು, ಕೃಷ್ಣಪರಮಾತ್ಮ, ಶನಿದೇವರು, ವಿಶ್ವಾಮಿತ್ರ—ಮುಂತಾಗಿ ಯಾವ ಯಾವ ಪಾತ್ರಗಳೊ! ಜೊತೆಗೆ 'ಮಠದ ಆಟ' ರಸ ವಿಷಯಗಳನ್ನು ಚರ್ಚಿಸು ವುದು, ಯಾರ ಯಾರ ತೋಟದಲ್ಲಿ ಸೀಬೆಯ ಹಣ್ಣುಗಳಿವೆ, ಅದನ್ನು ಕೀಳುವ ಬಗೆ ಹೇಗೆ? ಮುಂತಾದ ವಿಷಯಗಳ ಮೇಲೆ ಪರ್ಯಾಲೋಚನೆ, ಬೇಸರ ವಾದಾಗ ಚೌಕಬಾರ ಆಡುವುದು, ನಾವು ನಾವೇ ಕಟ್ಟುಕತೆಗಳನ್ನು ಹೇಳಿ

ಕೊಳ್ಳುವುದು, ಕಂಡು ಕೇಳಿದ ವಿಷಯಗಳನ್ನು ಬಡ ಮೇಲುಮಾಡಿ, ಎಲ್ಲರೂ ಅಚ್ಚರಿ ಪಡುವಂತೆ ವರ್ಣಿಸುವುದು ಮುಂತಾದ ಕಾರ್ಯಕ್ರಮಗಳಿಗೆ ಮೇದರ ಕಲ್ಲನ್ನೇ ಹುಡುಕಿಕೊಂಡು ಬರುತ್ತಿದ್ದೆವು. ಹೀಗೆ ಮೇದರಕಲ್ಲು ನಮ್ಮ ಸ್ವರ್ಗ ವಾಯಿತು.

ಮೇದರಕಲ್ಲು, ಇತರ ಬೆಟ್ಟಗಳಂತೆ ಗೋಪುರಾಕೃತಿಯನ್ನು ತಳೆದಿಲ್ಲ. ಇದನ್ನು ಬೆಟ್ಟವೆನ್ನದೆ 'ಕಲ್ಲು' ಎಂದು ಕರೆದರೂ ಅನೇಕ ದೊಡ್ಡ ದೊಡ್ಡ ಬಂಡೆ ಗಳು ಕೂಡಿ ನಿಂತು ಮೇದರಕಲ್ಲಾಗಿದೆ. ಮೇದರಕಲ್ಲಿನ ತುದಿಯಲ್ಲಿಯೂ ನಾಲ್ಕಾರು ಹಾಸು ಬಂಡೆಗಳಿರುವುದರಿಂದ, ಅದೊಂದು ಆಟದ ಬಯಲಿನಂತೆಯೇ ಇದೆ. ಅಲ್ಲಿ ಕಲ್ಲುಗಳ ತೋಳಿನಲ್ಲಿ ಕಾಡುಗಿಡಗಳೂ ಬೆಳೆದುಕೊಂಡಿವೆ. ಸಣ್ಣ ಸಣ್ಣ ಕಲ್ಲುಗಳಲ್ಲಿ ನೀರೂ ನಿಂತಿರುತ್ತದೆ. ಬಹಳ ವರ್ಷಗಳಿಂದ ಬಂಡೆ ಒಣಗಿದುದರಿಂದಲೋ ಏನೋ, ಕಪ್ಪು ವರ್ಣವನ್ನು ತಳೆದಿದ್ದರೂ, ಮೇಲೇರಿ ದವರು ಜಾರಿಬೀಳದಂತೆ ಒರಟಾದ ಕಲ್ಲೊಗಲಿದೆ. ನಾಲ್ಕೂ ಮೂಲೆಗಳಲ್ಲೂ ಪುಟ್ಟ ಪುಟ್ಟ ಗುಂಡುಗಳಿರುವುದರಿಂದ ಅವು ಕುಳಿತುಕೊಳ್ಳುವವರಿಗೆ ಪೀಠ ವೆನಿಸುತ್ತವೆ. ಕಲ್ಲುಗಳ ಮೇಲೆ ಕೂರಬಹುದು, ಹಾಸುಬಂಡೆಗಳ ಮೇಲೆ ಮಲಗಬಹುದು ಹಾಗೆ ಮಲಗಿ ಮುಗಿಲನ್ನು ನೋಡಿದರೆ, ದಿವಸ್ಪತಿಯ ಪ್ರಭೆಗೆ ಕಳೆಗೊಂಡ ಜೀಮೂತಗಳು "ನಮ್ಮನ್ನೂ ನಿಮ್ಮಲ್ಲಿಗೆ ಕರೆದುಕೊಳ್ಳು ವಿರ ?" ಎಂಬಂತೆ ತೇಲಿಬರುತ್ತಿರುತ್ತವೆ. ನಸುನೀಲಿಯ, ಸುವಿಶಾಲ ಪಟದಲ್ಲಿ ಧರಿತ್ರಿಯಿಂದ ಎಷ್ಟೋ ಕೂಗಿನ ದೂರದಲ್ಲಿ ವಿಮುಕ್ತ ಜೀವಿಗಳಂತೆ ಹಾರಾಡುವ ಹದ್ದುಗಳು, "ಮೇದರಕಲ್ಲು ನಮ್ಮದು ; ಈ ಪೋರರು ಆಕ್ರಮಿಸಿಕೊಂಡಿ ದ್ದಾರೆ !" ಎಂದು ಪರಿತಾಪಗೊಂಡಂತೆ ಚಕ್ರಾಕಾರದಲ್ಲಿ ನಮ್ಮ ಮೇಲೆಯೆ, ಸುತ್ತುತ್ತಿರುತ್ತವೆ. ಅದೋ ಅಲ್ಲಿ ಮೇದರಕಲ್ಲಿನ ನೆತ್ತಿಯಲ್ಲಿ ಅದೆಷ್ಟು ಆನಂದ ತನ್ಮಯರಾಗಿದ್ದಾರೆ ಅವರು ಎಂದು ದಿನಮಣಿಗೆ ತೋರಿಸುವ ಸಲುವಾಗಿ, ಬೆಳ್ಮೋಡವೊಂದು ದೂರದರ್ಶಿಯಂತೆ ಸೂರ್ಯನ ಕಣ್ಣು ಮುಚ್ಚಿದಾಗ, ಅದೆಲ್ಲಿಯೋ ಸುಪ್ತವಾಗಿದ್ದ ನೆರಳು ತೆರೆಯಾಡಿದಂತೆ ಓಡಿಬಂದು, ನಮ್ಮನ್ನು ತಬ್ಬಿ ಮುತ್ತಿಡುತ್ತದೆ. ಈ ಭಾಗ್ಯ ನಮಗಲ್ಲದೆ ಮತ್ತಾರಿಗೆ ದೊರೆತೀತು !

ಅದೆಷ್ಟು ದಿನಗಳನ್ನು ಇಲ್ಲಿ ಆಟವಾಡಿ ಕಳೆದೆನೊ ! ಊರನ್ನು ಬಿಟ್ಟು

ಪರಊರಿಗೆ ಮುಂದಿನ ವ್ಯಾಸಂಗಕ್ಕಾಗಿ ಹೊರಡುವ ದಿನ ಬಂದಿತು. ಯಾರೂ ಅರಿಯದಂತೆ ದುಃಖ ಉಮ್ಮಳಿಸಿ ಬಂತು ಮೇದರಕಲ್ಲು ಮುಂತಾದುವನ್ನೆಲ್ಲ ತೊರೆದು ದೂರದ ಊರೊಂದಕ್ಕೆ ಹೋಗಬೇಕಾಯಿತೆ ಎಂಬ ಅವ್ಯಕ್ತವೇದನೆ ಹೃದಯವನ್ನು ಹಿಂದೆ ಹತ್ತಿತು. ಬೆಟ್ಟಗಳಲ್ಲಿಯೇ ಆಡಿ ಬೆಟ್ಟಗಳಲ್ಲಿಯೇ ಬೆಳೆದ ನಾನು, ಇದೀಗ ಯಾವ ಹೊಸ ನೆಲೆಯಲ್ಲಿ ದಿನಗಳನ್ನು ಕಳೆಯಬೇಕೋ— ನಾನೆಷ್ಟು ಹತಭಾಗ್ಯ! ಎಂದು ಮರುಗಿದ್ದೇನೆ. ರಜದ ದಿನಗಳು ಎಂದಿಗೆ ಬರುವುವೊ! ಅದೆಷ್ಟು ಬೇಗ ನಾನು ಊರನ್ನು ಸೇರಿ, ನನ್ನ ಹಳೆಯ ಪರಿಚಿತ ನೆಲೆಗಳಿಗೆಲ್ಲ ಹೋಗಿ ನಲಿದುಬಂದೇನೋ ಎಂಬ ಕಾತರ ದಿನವೂ ಮಿಡಿಯುತ್ತಿರುತ್ತದೆ. ರಜದ ದಿನಗಳಲ್ಲಿ ತಪ್ಪದೆ ಊರಿಗೆ ಹೋಗುತ್ತೇನೆ. ಊರಿಗೆ ಎನ್ನುವುದಕ್ಕಿಂತ, ಮೇದರಕಲ್ಲಿಗೆ ಎಂದರೂ ತಪ್ಪಾಗಲಾರದು. ನಾನೂ ಎಲ್ಲಿದ್ದರೂ ಹೃದಯವನ್ನು ಸೆರೆಹಿಡಿಯುವ ಮೋಹಕಶಕ್ತಿ, ಯಾವುದೋ ಮಾಯಾಜಾಲ ಮೇದರಕಲ್ಲಿನಲ್ಲಿದೆ. ಊರಿಗೆ ಬಂದಾಗಲಂತೂ ಓದುವುದಕ್ಕೂ ತನ್ನಲ್ಲಿಯೇ ಎಡೆಮಾಡಿಕೊಟ್ಟಿದೆ ನನ್ನ ಮೇದರಕಲ್ಲು.

ನಾಲ್ಕು ಹೆಬ್ಬಂಡೆಗಳು ಮೇದರಕಲ್ಲಿನ ಕಣ್ಣುಹುಬ್ಬಿನಂತೆ ಮುಂಚಾಗಿವೆ. ಇದನ್ನು ನೋಡಿದರೆ ಮೇದರಕಲ್ಲು ಇನ್ನೆಲ್ಲಿ ಮುಗ್ಗರಿಸಿಬಿಡುವುದೋ ಎಂಬ ಭಯವು ಮೂಡುತ್ತದೆ ಮುಂದೆ ನಿಂತವರಿಗೆ. ಇನ್ನೆರಡು ವಿಶಾಲವಾದ ಬಂಡೆಗಳು ನೆಲದಿಂದ ಮೇಲೆದ್ದು ಈ ಬಂಡೆಗಳನ್ನು ಹೊತ್ತು ನಿಂತಿವೆ. ಯಾವ ಬೆಟ್ಟದಲ್ಲಿಯೂ ಕಾಣದ ಒಂದು ಬಗೆಯ ವಿಚಿತ್ರ ವರ್ಣಗಳನ್ನೂ ಈ ಬಂಡೆಗಳು ತಳೆದು ನಿಂತಿರುವುದನ್ನು ನಾವು ಕಾಣುತ್ತೇವೆ. ಅಡಿಯಿಂದ ಉಬ್ಬಿದ ಬಂಡೆಗಳನ್ನು ನೋಡುತ್ತ ಹೋದರೆ, ಮೊದಲು ಕೆಂಪುಮಿಶ್ರಿತ ಬಿಳಿ ಬಣ್ಣ ನಯನಮನೋಹರವಾಗಿ ತೋರುತ್ತದೆ. ಇಲ್ಲಿ ಕಲ್ಲು ಮಂಜುಗಡ್ಡೆಯಷ್ಟು ನಯವಾಗಿದೆ, ಅಷ್ಟೇ ತಂಪಾಗಿಯೂ ಇದೆ. ಮೇಲೆ ಹೋದಂತೆಲ್ಲ ಮಿಸುನಿವರ್ಣಕ್ಕೆ ತಿರುಗಿ, ಕೊನೆಕೊನೆಗೆ ವಿಷವರ್ಣ ಬಂಡೆಗಳನ್ನೆಲ್ಲಾ ಆವರಿಸಿದೆ. ಇದು ಮೇದರಕಲ್ಲಿನ ವರ್ಣವೈವಿಧ್ಯವಾದರೆ, ಅದರ ರೂಪಂತೂ ತೀರ ವಿಚಿತ್ರ. ಮುಂಭಾಗದಿಂದ ನೋಡಿದರೆ, ಇಲ್ಲಿರುವ ಬೆಟ್ಟಗಳಿಗೆಲ್ಲ ಇದೇನು ಹೃದಯವೋ! ಎನಿಸುತ್ತದೆ. ಯಾವುದೋ ಭಯಂಕರ ಪ್ರಾಣಿಯೊಂದು, ತನ್ನ ವಿಕರಾಳ

ಕಣ್ಣುಗಳಿಂದ ಜಗತ್ತನ್ನು ನೋಡುತ್ತ ಇಲ್ಲಿ ಮೌನ ಸಮಾಧಿಯಲ್ಲಿರುವಂತೆ, ಪ್ರಶಾಂತತೆಯ ಮಡಿಲಲ್ಲಿ, ತನ್ನ ಕಗ್ಗವಿಗಳ ಬಾಯಿತೆರೆದು ಮಂದಸಮೀರಣ ನನ್ನು ಆಸ್ವಾದಿಸುವಂತಿದೆ. ಕಲ್ಲಿನ ಒಂದು ಬದಿಯಲ್ಲಿ ಬಾಗಿದ ಬಂಡೆಯೊಂದು, ಘಟಸರ್ಪವೊಂದರ ಹೆಡೆಯಂತೆ, ಮೇಲೆ ಸುರಿಯುವ ಬಿಸಿಲನ್ನು ಕಬಳಿಸಿಕೊಂಡು ಕೆಳಗೆ ತನಿನೆಳಲನ್ನಿಕ್ಕುತ್ತಿದೆ. ಇಲ್ಲಿರುವ ಮಂಚಗಲ್ಲಿನ ಮೇಲೆ ಕುಳಿತರೆ, ತಾಯಿಯ ಮಡಿಲಿನಲ್ಲಿದ್ದ ಅನುಭವವಾಗುತ್ತದೆ. ಕೋಳಿ ತನ್ನ ಮರಿಗಳನ್ನು ಪ್ರೀತಿ ಮಮತೆಗಳಿಂದ ರೆಕ್ಕೆಯಲ್ಲಿ ಮುಚ್ಚಿಟ್ಟುಕೊಳ್ಳುವಂತೆ, ಮೇದರಕಲ್ಲು ಅಲ್ಲಿ ನೆರಳನ್ನು ಬಯಸಿಬಂದವರನ್ನು ಸಂತೈಸುತ್ತದೆ. ಸಂತುಷ್ಟರನ್ನಾಗಿ ಮಾಡುತ್ತದೆ. ಇಲ್ಲಿನ ಗಾಢಮೌನ, ಕಲ್ಲನ್ನೇ ಕರಗಿಸುವಂತಿದೆ. ಸುತ್ತುವರಿದ ಕಾರೆ, ಹೂಲಿ, ಗೆದ್ದಲಿಕೆ ಮೆಳೆಗಳೂ ಕೂಡ ಎಲ್ಲಿ ಅಲುಗಿದರೆ ಗಭೀರತೆಗೆ ಚುಚ್ಚಿ ದಂತಾದೀತೋ ಎಂದು ಸ್ನಿಗ್ಧ ಮೌನವನ್ನು ತಳೆದು ಅಲ್ಲಿ ಕುಳಿತವನು ಎಷ್ಟು ಮೂಕನಾಗಬಲ್ಲನೋ ಅದರ ನೂರ್ಮಡಿ ಮೌನದಿಂದ ನಿಂತಿವೆ.

ಇಲ್ಲಿಂದ ಮುಂದೆ ಕಣಿವೆ ಹಂತ ಹಂತಗಳಲ್ಲಿ ಇಳಿದು ಮುಂದಿರುವ ಬೆಟ್ಟ ಗಳಲ್ಲಿ ಮರೆಯಾಗುತ್ತದೆ. ನನ್ನ ಹೃದ್ಗರ್ಭದಲ್ಲಿ ಅಶಾಂತಿಯ ಲಹರಿಯೆದ್ದಾಗ ಈ ನೆಲೆ ಕೃಪೆಗೈದು ಹರಸಿ ತನ್ನ ಮಮತೆಯ ಜೇನನ್ನು ಸುರಿಸಿದೆ. ಮೇದರ ಕಲ್ಲಿನ ತಪ್ಪಲಿನಲ್ಲಿ ವಿಶ್ವದ ದಿವ್ಯಾತ್ಮರ ದರ್ಶನವನ್ನು ನಾನು ಪಡೆಯುತ್ತೇನೆ. ಋಷಿಪುಂಗವರಾದಿಯಾಗಿ ಒಮ್ಮೆ ಈ ನೆಲೆಯಲ್ಲಿ ಅಮೂಲ್ಯ ಪದಕಮಲವನ್ನು ಸೋಂಕಿಸಿ ಇಷ್ಟು ಪವಿತ್ರವಾದ ವಾತಾವರಣವನ್ನು ಕಲ್ಪಿಸಿಹೋದರೇನೋ ಎನಿಸುತ್ತದೆ ಮೇದರಕಲ್ಲಿನ ಹಿರಿಮೆಯ ವೈಜಯಂತಿ ಹಾರಿರುವುದು, ಬಹು ಭಾಗ ತನ್ನ ತಪ್ಪಲಿನಿಂದಲೇ ಎಂದು ನನ್ನ ಭಾವನೆ.

ಮುಂಜಾವಿನ ಚಳಿಯನ್ನು ಲೆಕ್ಕಿಸದೆ, ಮೇದರಕಲ್ಲನ್ನು ಏರಿಬಂದರೆ ಸುಪ್ರಭಾತ ದರ್ಶನದಿಂದ ಮನಸ್ಸು ಪ್ರಫುಲ್ಲವಾಗುತ್ತದೆ. ಶ್ರೇಣಿ ಶ್ರೇಣಿಯಲ್ಲಿ ಹಬ್ಬಿ ಹರಿದು ಹೋಗಿರುವ ಬೆಟ್ಟ ಬೀಡುಗಳ ನಡುವೆ ಮಂದಸ್ಮಿತನಾದ ಉಷಾ ಪ್ರಿಯ, ಹಸಿರ ಮಂಡವಿಗೆಗಳ ಮೇಲೆ ಮಾರ್ಗಣಗಳನ್ನೆಸೆಯುತ್ತ, ಅಮೃತ ಜಲಸೇಚನದಿಂದ ಪ್ರಕೃತಿಯನ್ನು ಪುಳಕಗೊಳಿಸುತ್ತ ಜಾತರೂಪಿಯಾಗಿ ಎದ್ದು ಬರುವಾಗ, ಎಳೆಬಿಸಿಲ ಮರೀಚಿಗಳ ಶುಭ್ರತೆಗೆ ತನ್ನ ಅಸಹ್ಯಕರ ಮೈಸೋಂಕಿ ಮಲಿನವಾದೀತೆಂಬ ಅಂಜಿಕೆ, ಕಣಿವೆ ಕಾಡುಗಳ ಮರೆಯಲ್ಲಿ ಇನ್ನು ಅವಿತು

ಕೊಂಡ ನಸುಗತ್ತಲನ್ನು ದೂರ ಸರಿಸುತ್ತದೆ. ಮೇದರಕಲ್ಲಿನ ಪರಮಪಾವನ ಪದಗಳನ್ನು ತೊಳೆದು ನಿಂತಿರುವ ಆ ಸೌಭಾಗ್ಯ ಸರಸ್ಸಿನಲ್ಲಿ ಹೊಸ ಜೀವಕಳೆ ಮೂಡಹತ್ತುತ್ತದೆ. ರನ್ನಗನ್ನಡಿಯಂತೆ ಮುಗಿಲನ್ನು ಬಿಂಬಿಸುವ ಈ ತಂಗೊಳದ ಸಿರಿಮುಡಿಯನ್ನು ನೇವರಿಸಿ ಮಲಗಿದ್ದ ಮಂಜು, ಬೆಟ್ಟಗುಡ್ಡಗಳ ಹೃದಯವನ್ನು ಸೇರಿಕೊಳ್ಳುತ್ತದೆ. ಪ್ರಸನ್ನವಾದ ಈಶ್ವರಶಕ್ತಿಯಂತೆ ಪ್ರವಾಹರೂಪದಲ್ಲಿ ಹರಿದುಬಂದ ಹೂಬಿಸಿಲು ಕಣಿವೆಯ ಕಲ್ಲು ಮಣ್ಣನ್ನೂ ಪವಿತ್ರಗೊಳಿಸುವ ಅಪೂರ್ವ ಸೌಂದರ್ಯ ಮೇದರಕಲ್ಲಿನ ಮೇಲಿದ್ದ ಯಾರನ್ನಾದರೂ ಮೈಯಿಕ್ಕು ವಂತೆ ಮಾಡೀತು!

ಇನ್ನು ಸಂಜೆಯ ಸೊಬಗು, ಬೆಳಗಿನ ಅನುಪಮ ಸೌಂದರ್ಯಕ್ಕೆ ಸೋಲು ವಂತಿಲ್ಲ. ಮೇದರಕಲ್ಲಿನ ಪಶ್ಚಿಮಕ್ಕೆ ಒಂದೆರಡು ಸಣ್ಣ ಗುಡ್ಡಗಳನ್ನು ಬಿಟ್ಟರೆ---- ಉಳಿದದ್ದೆಲ್ಲ ಬಟ್ಟಬಯಲು. ವರ್ಷಕಾಲವೂ ಹರಿಯುವ ವೀರ ವೈಷ್ಣವೆ ಜೀರಹಳ್ಳಿಯಿಂದ ಅರ್ಧ ಮೈಲಿಯ ದೂರದಲ್ಲಿಯೇ ಕಂಗೊಳಿಸುತ್ತಾಳೆ. ನದಿಯ ಆಚೆಯ ದಡದಲ್ಲಿ ಸುವಿಸ್ತಾರವಾದ ಗದ್ದೆಯ ಬಯಲು ಹಸಿರನ್ನು ಹೊದ್ದು ಮಲಗಿದ್ದರೆ, ಅಲ್ಲಲ್ಲಿ ಕವಿದುಕೊಂಡ ಕೆಲವು ತೆಂಗಿನ ತೋಟಗಳೂ ಸೊಂಪಾದ ನೋಟವನ್ನೆರೆಯುತ್ತವೆ. ಈ ಬಯಲನ್ನು ಒತ್ತರಿಸಿ ನಿಂತಿರುವ ದಾಸನಕೆರೆ ದಿಗಂತವನ್ನೂ ಚಾಚಿಕೊಂಡು, ನಂತರ ಕಣ್ಣಿಗೆ ಬೀಳುತ್ತದೆ. ಸಂಜೆಯಲ್ಲಂತೂ ಇಲ್ಲಿನ ರಮ್ಯ ದೃಶ್ಯ ಚೇತೋಹಾರಿಯಾದುದೇ ಸರಿ. ಬಳಲಿ ಬಂದು ರವಿದೇವ ನನ್ನು ತನ್ನ ದಿವ್ಯವಾದ ಮಡಿಲಿನಲ್ಲಿಟ್ಟುಕೊಳ್ಳಲು, ತನ್ನ ಒಲವಿನ ಒಡಲಲ್ಲಿ ಕೂಡಿಟ್ಟುಕೊಳ್ಳಲು, ನಿರೀಕ್ಷೆಯ ನೋಟದಲ್ಲಿ ಕೆರೆ ಮಿರುಮಿರು ಮಿರುಗುತ್ತಿರು ತ್ತದೆ. ನಿಬಿಡವಾಗಿ ಕವಿಯ ತೊಡಗುವ ಕೆಮ್ಮೋಡಗಳು, ಇನ್ನೇನು ತಮ್ಮ ಕೈಯಿಂದ ಜಾರಿಬೀಳುವ ಇವನ ಬಗ್ಗೆ ಶೋಕಾನನೆಯರಾಗಿ, ಮುತ್ತೈದೆಯ ಮುಡಿಯಿಂದ ಅಮೂಲ್ಯ ರತ್ನವೊಂದು ಬಿದ್ದುಹೋದಂತೆ, ತಮ್ಮನ್ನು ತೊರೆ ದುರುಳುವ ದಿನಪನನ್ನೇ ತಬ್ಬಿ ರೋದಿಸುವ ದೃಶ್ಯವನ್ನು ಮೇದರಕಲ್ಲಿನಿಂದ ನೋಡಿ ತೃಪ್ತರಾಗುವ ಭಾಗವೇ ಅಪಾರವಾದುದು, ಅಮೇಯವಾದುದು! ಮುಚ್ಚಂಜೆ ರವಿಯುಳಿದ ದುಃಖ ಸೂಚಕ ಚರಮಗೀತೆಯನ್ನುಲಿಯುತ್ತ ಕವಿದು ಬರುವಾಗ ಭಾರವಾದ ಹೃದಯದಿಂದ ಮೇದರಕಲ್ಲನ್ನು ಇಳಿದು ಊರಿನ ದಾರಿ

ಹಿಡಿಯುವಾಗ—ಇದೇಕೆ ಇಷ್ಟುಬೇಗ ಕತ್ತಲಾಯಿತು—ಎಂದು ಮನಸ್ಸು ಅಸಮಾಧಾನದ ತೊಟ್ಟಿಲಲ್ಲಿ ತುಯ್ದಾಡುತ್ತದೆ.

ಮೋದರಕಲ್ಲು!

ನಿಜ, ಅದು ಬರಿಯಕಲ್ಲು. ಚಲನವಲನಗಳಿಲ್ಲದ, ಜೀವಭಾವಗಳಿಲ್ಲದ ಅದೊಂದು ಜಡವಾದ ಕಗ್ಗಲ್ಲು! ಆದರೆ, ಕಲ್ಲಾದರೇನು? ಬುವಿಯಲ್ಲಿ ತಾನು ಒಡಮೂಡಿದ, ಸೃಷ್ಟಿಕರ್ತ ತನ್ನನ್ನು ನಿರ್ಮಿಸಿದ 'ಆ' ಪರಮಗುರಿಯನ್ನು ತಾನು ಸಾಧಿಸಿಕೊಂಡಿದೆ. ಬಾಳ್ವೆಯ ಬೆಲೆಯನ್ನರಿತು ಕಲ್ಲಾದರು ಕೈವಲ್ಯ ವನ್ನು ಸೃಜಿಸಿ ತೋರಿಸಬಲ್ಲ ಅತುಳಶಕ್ತಿಯನ್ನು ಗಳಿಸಿಕೊಂಡಿದೆ. ನಿಸ್ವಾರ್ಥದ ಬಾಳ್ವೆಯಲ್ಲಿ ಬೆಳಗಿ 'ನಾನು ನನಗಾಗಿಯಲ್ಲ—ಹೆರರಿಗಾಗಿ' ಎಂಬ ದಿವ್ಯ ಸತ್ಯ ವರ್ಷವನ್ನು ವರ್ಷ ವರ್ಷಗಳಿಂದಲೂ ಸಾರುತ್ತ ಬಂದಿದೆ, ಸಾರುತ್ತಿದೆ. ಹತ್ತು ಹಲವರ ನೆಚ್ಚಿನ ಕಲ್ಲಾಗಿ ತನ್ನನ್ನು ತಾನೇ ಮರೆತಿದೆ ಆ ನನ್ನ 'ಕಲ್ಲು!' ನಾನು ಎಲ್ಲಿದ್ದರೇನಂತೆ, ಓ! ನನ್ನ ಪರಮಗುರು 'ಮೋದರಕಲ್ಲೇ!' ಇಗೋ ನಿನಗೆ ಭಕ್ತಿಭಾವದಿಂದ ಮಣಿಯುತ್ತಿದ್ದೇನೆ.

# ಆಲತಿಗಿರಿ ಯಾತ್ರೆ

ಬೆಳೆದ ಹೊಲಗಳನ್ನು ಬಳಸಿ, ಬದುಗಳನ್ನೂ ಹಾಯ್ದು ಮರಗಳ ನೆರಳಿನಲ್ಲಿ ಹರ್ಷಾನನರಾಗಿ, ಬಯಲಿನಲ್ಲಿ ಪೊನಲಂತೆ ಹರಿದು ಜೌಗಿನಲಿ ಖಗದಂತೆ ಹಾರಿ, ಹಳ್ಳದಲ್ಲಿ ಮಿಗದಂತೆ ಜಿಗಿದು, ಹೆಂಚಿಯ ತೆಂಡೆಗಳ ಬಳಿ ತರಗಿನಂತೆ ತೂರಿ — ಹೊದರುಗಳನ್ನು ಮುರಿದು, ಬಳ್ಳಿಗಳನ್ನು ಹರಿದು, ಕಲ್ಲುಗಳನ್ನೆಡವಿ— ಬಿಸಿಲಿಗೆ ಬಸವಳಿಯದೆ ಹಳ್ಳಿಯ ಹಾದಿಯನ್ನು ನಡೆಯುವ ಕೆಚ್ಚಿದ್ದರೆ ಆಲತಿ ಗಿರಿಗೆ ಯಾತ್ರೆಯನ್ನು ಕೈಗೊಳ್ಳುವ ಧೈರ್ಯಮಾಡಬೇಕು.

ಕಾಲಿನಲ್ಲಿ ಪಾದರಕ್ಷೆಗಳಿವೆ. ಪಂಚೆಯನ್ನು ಮುಂಡಿಯಿಂದ ಮೇಲೆ ಮಡಿಸಿ ನಡುವಿಗೆ ಸುತ್ತಿದ್ದೇವೆ; ಶುಭ್ರವಾದ ಬಿಳಿಯ ಜುಬ್ಬವನ್ನೂ ಕೊಡೆಯ ಕರಿ ನೆರಳು ನುಂಗಿದೆ; ಆದರೂ ಗಿರಿಯ ಬುಡವನ್ನು ಸೇರುವುದರಲ್ಲಿ ಉಸಿರಾಡಿ ಕೊಂಡೆವು! ಏರು ಇಳಿವುಗಳು, ತಿರುವು ಮುರುವುಗಳು ವಿಶೇಷವಾಗಿ ಅಡ್ಡ ಬಂದರೂ ವಿನೋದದಿಂದ, ವಿಲಾಸದಿಂದಲೇ ಪಾರಿಸಾಗಿ ಬಂದ ನಮಗೆ ಅಷ್ಟೇನೂ ಆಯಾಸ ತೋರದಿದ್ದರೂ ನಮ್ಮ ಮುಂದೆ ಅನಂತವಾಗಿ ಹಬ್ಬಿ ನಿಂತಿರುವ ಈ ಬೃಹದ್ ಗಿರಿಯನ್ನೇರುವ ಸಮಸ್ಯೆ ಮೂಡಿ ನಿಂತಿತು.

ನಾವು ನಾಗಮಂಗಲದಿಂದ ಹೊರಟು ಅಂಚೆಚಿಟ್ಟನ ಹಳ್ಳಿಯ ಬಳಿಯಿಂದ ಮೂಡಣಕ್ಕೆ ನಡೆದು ಇತ್ತ ಬಂದವರು. ಇಲ್ಲಿಂದ ಮಲ್ಲೇಶ್ವರನ ಸನ್ನಿಧಿಗೆ ಹೋಗಲು ಮೆಟ್ಟಲು ಸಾಲುಗಳಿಲ್ಲದಿದ್ದರೂ ಕಲ್ಲನ್ನು ಒಡೆದು, ಸುಲಲಿತವಾಗಿ ಏರಿಹೋಗುವಂತೆ ಒಂದು ಹಾದಿಯನ್ನು ಪೂರ್ವಿಕರೇ ನಿರ್ಮಿಸಿದ್ದಾರೆ. ಶತಶತಮಾನಗಳಿಂದ ಅಸಂಖ್ಯಾತ ಮಂದಿಯ ಪದಾಘಾತಕ್ಕೀಡಾದ ಈ ಕಲ್ಲು ಹಾದಿಯೂ ಕೂಡ ಸವೆದು ಕೃಶವಾಗಿದೆ. ನೇರವಾದ ಹಾದಿಯಿಲ್ಲವೆಂದು ನಿಂತೆಡೆಗೆ ನಮಗೆ ಗೋಚರಿಸಿತು. ಗಿರಿಯನ್ನೇರಲು ಆರಂಭಮಾಡುವ ಮುನ್ನ ಹಿಮಾಲಯವನ್ನೇರಿ ಜಯ ಪತಾಕೆಯನ್ನು ಹಾರಿಸಿದ ತೇನ್‌ಸಿಂಗ್ ಮತ್ತು ಹಿಲ್ಲೋರಿಯರ ನೆನಪಾಯಿತು. ಅವರ ಧೈರ್ಯಸಾಹಸವೇ ನಮ್ಮ ಊರೆಗೋಲಾಯಿತು! ಹಬ್ಬ ಹರಿದಿನ

ಗಳಲ್ಲಿ ನೂರಾರು ಮಂದಿ ಹೆಂಗಸರು ಮಕ್ಕಳು ಈ ಬೆಟ್ಟವನ್ನೇರಿ ಮಲ್ಲೇಶ್ವರನನ್ನು ಪೂಜಿಸಿ ಹೋಗುವರೆಂಬ ವಿಷಯ ನಮ್ಮಲ್ಲಿ ಮತ್ತೂ ಧೈರ್ಯವನ್ನು ತುಂಬಿತು. ನಮ್ಮ ಆರೋಹಣ ಆರಂಭವಾಯಿತು.

ಮಹಾನಗರಿಯೊಂದನ್ನು ಕೌತುಕದಿಂದ ಹೊಗುವ ಹಳ್ಳಿಯ ವೀಕ್ಷಕರಂತೆ ಶಿಲಾ ಸೀಮೆಯ ಅಸಮಾನ ಸೌಂದರ್ಯರಸವಾಹಿನಿಯಲ್ಲಿ ಮಿಂದು, ಮುಗ್ಧರಾಗಿ ಔನ್ನತ್ಯದ ಕಡೆ, ದಿವ್ಯತೆಯ ಕಡೆ ಕ್ಕೆ, ಜಾಚಿ ಗಿರಿಯನ್ನೇರುವ ನಮಗೆ ಮುಂದೆ ಸಾಗಿದಂತೆಲ್ಲ ನವೋತ್ಸಾಹ, ನವಚೈತನ್ಯಗಳು ಮೂಡಿಬಂದವು. ಅಲ್ಲಿ ಬಳಸಿ, ಇಲ್ಲಿ ಸುತ್ತಿ ಪರ್ಬಂಡೆಯೊಂದನ್ನು ಕಣ್ಣಾರಳಿಸಿ ನೋಡಿ ಕಾಡುಗಳ್ಳಿಯ ಸಾಲುಗಳನ್ನು ಹಿಂದೆ ತಳ್ಳಿ, ನೆರೆಯ ಗಿಡಬಳ್ಳಿಗಳೊಡನೆ ಸಖ್ಯ ಬೆಳಸಿ, ಇಕ್ಕೆಲದ ಕಿಬ್ಬಂಡೆಗಳ ಮುಡಿಯನ್ನು ನೇವರಿಸಿ, ಬೋಳೆಯ ಹುಲ್ಲಿನೊಡನೆ ಸರಸವಾಡಿ–ಮುಂದುವರಿಯುವಾಗ ಒಂದೊಂದು ತಿರುವಿನಲ್ಲಿಯೂ ಹೊಸಭಾವ ಹೊಸ ಆವೇಶಗಳು ಕೈ ಹಿಡಿದು ಮುಂದೆ ನಡೆಸುತ್ತವೆ. ನಿರ್ಜನವಾದ, ನೀರವವಾದ ಪ್ರದೇಶ. ಆದರೂ ಆಗಾಗ ನಮ್ಮ ಸಪ್ಪಳವನ್ನರಿತ ಕಾಡು ಇಲಿಗಳು, ಕೀರಗಳು, ಮೊಲಗಳು–ನೆರೆಹೊರೆಯ ಪೊದರುಗಳಿಂದ ಸರಸರನೆ ಹೊರಹೊಮ್ಮಿ ಎತ್ತಲೋ ಧಾವಿಸುತ್ತಿದ್ದಾಗ ಇದ್ದಕ್ಕಿದ್ದಂತೆಯೇ ಕೇಳಿಬರುವ ಆ ಶಬ್ದಕ್ಕೆ ಮೈ 'ಜುಂ' ಎನ್ನುತ್ತದೆ.

ನಮ್ಮ ಛತ್ರಿ ಮೇಲೇರಿದಂತೆಲ್ಲ ಬಿಸಿಲು ತನ್ನ ಜಳವನ್ನು ವೃದ್ಧಿಗೊಳಿಸುತ್ತಾ ಹೋಗುತ್ತದೆ. ಮುಂದುವರಿದಂತೆಲ್ಲ ಶ್ರೇಣಿಯ ಅಗಾಧತೆ ಅರಿವಾಗಿ–ಎಲ್ಲಿಗೋ ಏರಿಸಿ, ಎಲ್ಲಿಗೋ ಇಳಿಸುವ, ಒಮ್ಮೆ ಮಿರುಗುವ, ಒಮ್ಮೆ ಕರಗುವ, ಒಮ್ಮೆ ಬಳಸಿ ಮತ್ತೊಮ್ಮೆ ಮರೆಯಾಗುವ ಈ ಹಾದಿ ನಮ್ಮೊಡನೆ ಸರಸವಾಡುವಂತೆ ತೋರುತ್ತದೆ. ಎಷ್ಟೋ ದೂರವನ್ನು ಏರಿ ಬಂದಿರಬೇಕು. ಸುತ್ತೆತ್ತಲೂ ಬರಿಯ ಬಂಡೆಗಳ ಸಾಮ್ರಾಜ್ಯ ; ಮೇಲಿನ ವಿಶಾಲವ್ಯೋಮ ; ಇಲ್ಲಿನ ಅವೃತ ಗಿರಿರಾಜಿ ; ಭೂಮಿ ನಮ್ಮಿಂದ ದೂರವಾಯಿತು. ಎತ್ತ ನೋಡಿದರೂ ಒಡಕು ಬಂಡೆಗಳು ; ಬಾಡಿದಂತಿರುವ ತರುಲತೆಗಳು; ಇಷ್ಟಾದರೂ ದಾರಿಗೆ ಕರುಣೆಯೇ ಇಲ್ಲ. ಒಂದೊಂದು ಹೆಜ್ಜೆಯೂ 'ಇನ್ನೂ ಎಷ್ಟುದೂರ?' ಎಂಬಂತೆ ವೇಗವನ್ನು ನುಂಗಿಕೊಳ್ಳುತ್ತಿದೆ. ಇನ್ನೂ.... ಇನ್ನೂ ಹೋಗಲೇಬೇಕು.

ಇಲ್ಲಿ ಗುಹಾವಾಸಿಯಾದ ಮಲ್ಲೇಶ್ವರನನ್ನು ದರ್ಶಿಸುವುದೊಂದೇ ನಮ್ಮ ಮುಖ್ಯ ಗುರಿಯಲ್ಲ. ಈ ಗುಹೆಯ ವೈಶಿಷ್ಟ್ಯವನ್ನು ಸವಿಯಬೇಕು; ಕಲ್ಲು ಕರಗುವುದೆಂಬುದನ್ನು ಇಲ್ಲಿ ಕಣ್ಣಾರೆ ನೋಡಬೇಕು; ಈ ಗಿರಿಯ ವೈಚಿತ್ರ್ಯ ವನ್ನು ಮನಸಾರೆ ತಣಿಯಬೇಕು—ಎಂಬ ಉದ್ದೇಶದಿಂದ ಬಂದವರು ಏರು ದಾರಿಯ ಏಣುಏಣುಗಳಲ್ಲಿ ಕಣ್ಣುಹಾಯುವಾಗ ವಿಕಾರಾಕೃತಿಯ ವೃದ್ಧ ಬಂಡೆಗಳು ವಯೋಮಿತಿಯನ್ನ ಮೀರಿ ಬಿರುಕಿನ ಬಲೆಯನ್ನು ಹೊದೆದು ನಿದ್ರಿಸುವಾಗ ಸನ್ನಿವೇಶ ಭೀಕರವಾಗತೊಡಗುತ್ತದೆ. ಇನ್ನೂ ನಿರ್ದಿಷ್ಟ ನೆಲೆ ದೊರೆಯದಿದ್ದುದಕ್ಕಾಗಿ ಹೃದಯಾಂತರಾಳದಲ್ಲಿ ನಿರಾಶೆಯ ಕುಡಿ ಮುಡಿ ಚಾಚಿ ನಿಲ್ಲುವಾಗ ಕಾಲುಗಳು ಸೋತು ವಿಶ್ರಾಂತಿಯ ಆಸರೆಯನ್ನೂ ಬಯಸು ವಾಗ-ಎಡಹಿದಲ್ಲಿಯೇ ಸಗ್ಗದಬಾಗಿಲು ತೆರೆದಂತೆ—ಅದೋ ಮತ್ತೆ ಭೂರಮೆ ಪ್ರಸನ್ನ ವದನೆಯಾಗಿ ಎರಡು ಬಂಡೆಗಳ ನಡುವೆ ಗೋಚರಿಸತೊಡಗಿದ್ದಾಳೆ; ಬೆಟ್ಟದ ಬೆನ್ನನ್ನು ತಲುಪಿ ಆ ಕಡೆಯ ಬಯಲನ್ನು ಕಂಡಿದ್ದೇವೆ !

ಇದೇನು ಬೆಟ್ಟದ ನೆತ್ತಿಯಲ್ಲ. ದಾರಿ ಮಟ್ಟಸವಾಗಿ ಹರಿದು ಬಲಕ್ಕೆ ಸಾಗಿ ಮುಂದೆ ನೋಡಿ ಎಂದಾಗ ನಯನಗಳು ಕೌತುಕದಿಂದ ಅರಳಿ ನಿಂತು ಮನಸ್ಸಿಗೆ ಹರ್ಷಲಹರಿಯನ್ನು ತುಳುಕಿಸುವಾಗ-ಯಾವ ದಿಸೆಯಿಂದಲೋ ತೀಡಿಬಂದ ಮಂದಾನಿಲ ದಯಾಮಯನಂತೆ, ದಣಿದ ನಮ್ಮನ್ನು ಸಂತೈಸುವಾಗ ಹೆಬ್ಬಂಡೆಗಳೊಡಲಲ್ಲಿನ ನಿರ್ಮೂಲ ಕರುಣೆಯಂತೆ ಶ್ವೇತ ಮಂಟಪವೊಂದು ಪಥಿಕರನ್ನು ಸ್ವಾಗತಿಸುವಾಗ-ಅವರೆದುರಿನಲ್ಲಿಯೇ ಉನ್ನತವಾಗಿ ಬೆಳೆದು ನಿಂತ ನಾಲ್ಕಾರು ವೃಕ್ಷಗಳು "ದೇವದೇವನೆದೆಯೊಲವೆ ಹರಿಹರಿದು ನೆರಳಾಯಿ ತಿಲ್ಲಿ ಬನ್ನಿ" ಎಂದು ಸ್ವಾಗತಿಸುತ್ತವೆ. ಪಾದರಕ್ಷೆಗಳನ್ನು ಪೊದೆಯೊಂದರಲ್ಲಿಟ್ಟು ಅಪೂರ್ವ ಜಯವನ್ನು ಪಡೆದವರಂತೆ ಛತ್ರಿಗಳನ್ನು ಮಡಿಸಿ ಕಟ್ಟೆಯೊಂದರ ಮೇಲೆ ಮಂಡಿಸಿ—ನಮ್ಮೆದುರಿಗೆ ಎತ್ತರದಲ್ಲಿದ್ದರೂ ಹತ್ತಿರದಲ್ಲಿರುವಂತೆಯೇ ತೋರುವ ಆ ಮಂಟಪವನ್ನು ಕುತೂಹಲಭರಿತರಾಗಿ ನೋಡುತ್ತೇವೆ.

ಆ ಪೆರ್ಬಂಡೆಗಳ ಗಡಣವನ್ನಾಶ್ರಯಿಸಿ ಬೆಳೆದು ನಿಂತ ಹಸಿರುತರುಗಳ

ತನಿನೆರಳಿನಲ್ಲಿಯೇ, ಭೀಕರಾಕಾರದ ಬಂಡೆಯೊಂದರ ಗರ್ಭಕ್ಕೆ ಮುಡಿಸಿದ ಆಭರಣದಂತಿರುವ ಆ ಮಂಟಪ! ದೃಷ್ಟಿ ಆಳವಾದಂತೆಲ್ಲ ಅದರೆದೆಯಲ್ಲಿ ಗೋಚರಿಸುವ ಒಂದು ಮರದ ಬಾಗಿಲು! ಆ ಬಾಗಿಲ ಹಿಂದೇನಿರಬಹುದು! ಆ ಉನ್ನತ ಬಂಡೆಯನ್ನೇ ಕೊರೆದಿರಬಹುದು! ಭೀಕರತೆಯಲ್ಲಿ ಸೌಮ್ಯತೆಯನ್ನು ತುಂಬಿದಂತೆ ಕಲ್ಲಿನೆದೆಯಲ್ಲಿ ದಿವ್ಯತೆಯಡಗಿರಬಹುದು. ಗುಹೆಯಲ್ಲಿ ಪಿನಾಕಿ ತಪೋರೂಢನಾಗಿರಬಹುದು! ಇಲ್ಲಿನ ಔನ್ನತ್ಯದಲ್ಲಿ, ಇಲ್ಲಿನ ಗಾಂಭೀರ್ಯದಲ್ಲಿ, ಇಲ್ಲಿನ ರಮಣೀಯತೆಯಲ್ಲಿ ಯಾವ ಮನಸ್ಸಾದರೂ ಮಧುರವಾಗುತ್ತದೆ, ಭಕ್ತಿಭಾವ ತಾನಾಗಿಯೇ ಮೂಡಿ ನಿಲ್ಲುತ್ತದೆ.

ಮಧ್ಯಾಹ್ನದ ಬೆಳ್ಳಿಬಿಸಿಲು ಶಿಲಾಸಾಮ್ರಾಜ್ಯವನ್ನಾಳುವಾಗ ತಂಪಿನ ಆಸರೆಯಂತಿದ್ದ ಆ ಹೆಬ್ಬಂಡೆಗಳ ಬಳಿಗೆ ಮೆಟ್ಟಿಲುಗಳನ್ನೇರಿ ಬಂದುದಾಯಿತು. ಬಂಡೆ ಕಣ್ಣು ಮುಚ್ಚಿಕೊಳ್ಳುವಂತೆ ಬೀಗಮುದ್ರೆಯಾಗಿದ್ದ ಬಾಗಿಲು! ಅತೀವ ಪ್ರಯಾಸದಿಂದ ಬೆಟ್ಟವನ್ನೇರಿ ಬಂದವರು ಬರಿಯ ಬಂಡೆಯ ದರ್ಶನದಿಂದಲೇ ತೃಪ್ತರಾಗಿ ಹಿಂದಿರುಗಿದರೆಂತು! ಸಮಸ್ಯೆ ಜಟಿಲವಾಯಿತು. ಅರ್ಚಕರನ್ನು ಕರೆಯಲು ಮತ್ತೆ ಗಿರಿಯನ್ನಿಳಿದು ನೆರೆಯ ಗ್ರಾಮಕ್ಕೆ ಹೋಗಬೇಕು; ಬಳಲಿ ಬೇಸತ್ತಿದ್ದ ನಮ್ಮಲ್ಲಿ ಮತ್ತೆ ಹೋಗಿ ಬರುವವರಾದರೂ ಯಾರು! ದೂರದಿಂದ ಬರುವ ಪಯಣಿಗರಿಗೆ ನಿರಾಶೆಯನ್ನುಂಟುಮಾಡುವ ಆ ಬೀಗವನ್ನು ಪುಡಿಪುಡಿಮಾಡುವ ಆವೇಶವುಕ್ಕಿದುದೂ ಉಂಟು. ಜಡವಸ್ತುವಿನ ಮೇಲೆ ಕೋಪತಾಪಗಳನ್ನು ಬೀರುವ ಅವಿವೇಕ ನಾಚಿಕೆಗೇಡೆನಿಸಿತು. ಅಷ್ಟು ಬೆಲೆಬಾಳುವ ಬೀಗವದಲ್ಲದಿದ್ದರೂ ಅದನ್ನು ಜಜ್ಜಿ ಬಿಸುಟರೆ ಅರ್ಚಕನ ಶಾಪಕ್ಕೆ ಗುರಿಯಾದೇವು! ದೇವರ ಸನ್ನಿಧಿಯಲ್ಲಿ ಈ ಕಾರ್ಯವು ತಕ್ಕುದಲ್ಲ. ಆದರೂ ಗುಹೆಯನ್ನು ನೋಡಿಯೇ ಹೋಗಬೇಕು. ಬಂಡೆಯನ್ನು ಕೊರೆದ ವೈಚಿತ್ರ್ಯವನ್ನು, ಸಾಹಸವನ್ನು ಕಣ್ತುಂಬ ತಣಿದೇ ಹೋಗಬೇಕು. ಅದಕ್ಕಿರುವ ಅಡ್ಡಿ ಈ ಬೀಗವೊಂದೆ.

ಉತ್ಸಾಹಕ್ಕೆ ಉಳಿಯ ಏಟಾಯಿತು, ಕಾತುರಕ್ಕೆ ಕಾಲು ಮುರಿದಂತಾಯಿತು. ಯೋಚನೆಯ ಬಲೆಯಲ್ಲಿ, ನೆರೆಯಲ್ಲಿದ್ದ ಜಗುಲಿ ಗೋಡೆಯ ಮೇಲೆ ಕುಳಿತುಕೊಂಡೆವು. ಅಕ್ಕಪಕ್ಕದ ಗಿಡಬಂಡೆಗಳೆಲ್ಲ ನಮ್ಮೊಡನೆಯೇ ಚಿಂತಾ

ಮುಗ್ನವಾದಂತೆ ತೋರುವಾಗ ಗೆಳೆಯರೊಬ್ಬರು ಅದ್ಭುತವನ್ನು ಕಂಡಂತೆ ಇದ್ದಕ್ಕಿದ್ದಂತೆಯೇ ಜೇಬಿನಿಂದ ಒಂದು ಬೀಗದ ಕೈಗೊಂಚಲನ್ನು ತೆಗೆದು, "ಸಿಕ್ಕಿತು!" ಎಂದು ಜಿಗಿದೆದ್ದರು. ಏನು ಸಿಕ್ಕಿತೆಂಬುದನ್ನು ಊಹಿಸುವ ಮೊದಲೇ ಅವರು ಬೀಗವನ್ನು ತೆಗೆದು ಸಂತೋಷದಿಂದ ಹಸ್ತಲಾಘವವಿತ್ತರು. ನಮ್ಮ ವದನಾರವಿಂದಗಳು ಅರಳಿದವಾದರೂ ಸಂಬಂಧಪಟ್ಟವರ ಅಪ್ಪಣೆ ಇಲ್ಲದೆ ಬಾಗಿಲನ್ನು ತೆಗೆಯುತ್ತಿದ್ದೇವೆ ; ಇದು ಅಪರಾಧ ಎಂದು ಅಂತರಾತ್ಮ ಅಸಮ್ಮತಿ ಯನ್ನು ಸೂಚಿಸುವಾಗ—ಒಂದೆರಡು ನಿಮಿಷ ಮತ್ತೆ ಯೋಚಿಸಿ ಒಳ್ಳಿತಕ್ಕಾಗಿ ನಾವೆಸಗಿರುವ ಈ ಕಾರ್ಯ ಅಪರಾಧವಲ್ಲವೆಂದು ನಾವು ನಾವೇ ಸಮಾಧಾನದ ಮಾತುಗಳನ್ನಾಡಿಕೊಂಡು, ಅಪರಾಧವಾಗಿದ್ದರೆ ಆ ಮಹಾಮಹಿಮ ಮಲ್ಲೇಶ್ವ ರನೇ ನೋಡಿಕೊಳ್ಳಲೆಂದು, ಮುಂದುವರಿದು ಕುತೂಹಲವಿಹ್ವಲರಾಗಿ ನಮ್ಮ ಆಶಾನಿಧಿಯ ಅಡ್ಡಗೋಡೆಯಂತಾಗಿದ್ದ ಆ ಪುರಾತನ ಬಾಗಿಲನ್ನು ಹಿಂದೆ ತಳ್ಳಿದೆವು. ಒಳನೋಟವೆಂತಹದೋ ಎಂದು ಕಾತುರಪಡುವ ನಮ್ಮ ಕಣ್ಣಿಗೆ ಅಗಾಧವಾದ ಕತ್ತಲ ಮೊತ್ತ ಮೆತ್ತಿಕೊಂಡು ಗುಹೆ ತನ್ನ ಕರಾಳಬಾಯನ್ನು ತೆರೆದು ಆಕಳಿಸಿದಂತೆ "ದೋೀ..." ಎಂಬ ಸದ್ದು ಹೊಮ್ಮಿ ಕ್ರಮಕ್ರಮೇಣ ಕರಗಿ ಹೋಗಿ ಮನಸ್ಸಿಗೆ ಕ್ಷಣಕಾಲ ಕಂಪನವನ್ನೇ ತಂದೊಡ್ಡಿತು. ರುದ್ರ ಮೌನದ ಮಡಿಲಲ್ಲಿ ಘೋರತರವಾದ ಮತ್ತೊಂದು ಬಗೆಯ "ಸರ...ಸರ... ಸಪ್....ಸಪ್" ಸದ್ದು ಗುಹೆಯೊಳಗಿನಿಂದಲೇ ತೇಲಿಬಂದು ಹೆಜ್ಜೆಗಳನ್ನು ಹಿಂದೆ ಕೀಳುವಂತೆ ಮಾಡಿತು.

ಅಪರಿಚಿತ ಗುಹೆ. ಅದರಂತರಾಳದಲ್ಲಿ ಅಡಗಿರುವುದಾದರೂ ಏನಿದೆಯೊ! ಒಳಗಿನಿಂದ ತೇಲುವ ಒಂದು ಬಗೆಯ ಚಿಮು ಚಿಮು ಒಗರು ಗಂಧ. ಯಾವ ಕಾಡು ಪ್ರಾಣಿಯ ಆವಾಸಸ್ಥಾನವೋ ಎಂದು ಎದೆ ನಡುಗಿ ತಾದರೂ ಹತ್ತು ನಿಮಿಷ ಅಲ್ಲಿಯೇ ನಿಂತು, ಏನೂ ಇರಲಾರದೆಂಬುದು ನಿಶ್ಚಿತವಾದ ಮೇಲೆ, ಆ ಬಗೆಯ ಸದ್ದು ಬಾವಲಿಗಳ ಸುಳಿವಿನಿಂದಾದುದೆಂದು ಖಂಡಿತವಾದ ಮೇಲೆ, ಆಳೆತ್ತರದ ಆ ಗುಹಾದ್ವಾರದಲ್ಲಿ ಅಡಿಯಿಟ್ಟು ಘನತಿಮಿರಗರ್ಭವನ್ನು ಭೇದಿಸಿಕೊಂಡು ನಾಲ್ಕು ಗಜ ಮುಂದೆ ಬಂದೆವು. ನಮ್ಮ ನೆರವಿಗೆಂದೇ ಬೆಂಬಳಿಯಿಂದ ಬೆಳಕಿನ ಕಿರಣಗಳು ತೂರಿ ಬಂದು

ಗುಹೆಯ ಬಾಯನ್ನು ಅಷ್ಟು ದೂರ ಹಸನುಗೊಳಿಸಿದವು. ಬೆಳಕನ್ನು ಕಾಣು ತ್ತಿದ್ದಂತೆಯೇ ಕಲ್ಲಿಗಂಟಿಕೊಂಡಿದ್ದ ಬಾವುಲಿಯ ಹಿಂಡು ಬುರ್ರನೆ ಹಾರಿ ಗವಿಯ ಗಂಟಲಿನಲ್ಲಿ ಆವೆಲ್ಲಿಯೋ ಮಾಯವಾದವು. ದೂರ ದೂರದಿಂದ 'ಸರ್-ಬರ್' ಸದ್ದು ಕೇಳಿಬರುತ್ತಿದ್ದುದರಿಂದ ಬಹಳ ದೂರದವರೆವಿಗೂ ಇದು ಆವರಿಸಿಕೊಂಡಿರಬಹುದೆಂಬುದು ವ್ಯಕ್ತವಾಗುತ್ತಿತ್ತು. ಹೊರಗಿನ ಕಲ್ಲು ಬಿಸಲಿಗೆ ಬಿರಿಯುವಂತೆ ಕಾದಿದ್ದರೂ ಗುಹೆಯ ಒಳಭಾಗ ಹಿಮಕ್ಕಿಂತಲೂ ತಣ್ಣಗಿರುವುದು ನಮಗೆ ಆಚ್ಚರಿಯನ್ನುಂಟುಮಾಡಿತು. ಎಡಬಲ ಪಾರ್ಶ್ವಗಳನ್ನು ಸ್ಪರ್ಶಿಸು ವಾಗ ಒರಟೊರಟಾಗಿ ಗೋಚರಿಸಿದ ಶಿಲಾದ್ವಾರಗಳನ್ನು ನೋಡಿದಾಗ ಅದು ನೈಸರ್ಗಿಕ ಗುಹೆಯಲ್ಲವೆಂದು ಅರಿವಾದರೂ ಬಾಚಿಯಿಂದ ಮರವನ್ನು ಕೆತ್ತಿದಂತೆ ಉಂಟಾಗುವ ಕಚ್ಚುಗಳಂತೆ ಕಲ್ಲಿನ ಈ 'ಗುರುತು'ಗಳು ಒಂದರ ಹಿಂದೊಂದು ದಳದಳವಾಗಿ ಹಬ್ಬಿರುವುದನ್ನು ನೋಡಿದರೆ ಕೊಡಲಿಯಿಂದ ಕಲ್ಲನ್ನು ಕಡಿದು ನಿರ್ಮಿಸಿರುವಂತೆ ತೋರುತ್ತದೆ. ಹಿಂದೆ ಪರಶುರಾಮ ಇಲ್ಲಿಗೆ ಬಂದು ತನ್ನ ಕೊಡಲಿಯಿಂದಲೇ ಬಂಡೆಯನ್ನು ಕಡಿದು ತಾನು ಗುಹೆಯನ್ನು ನಿರ್ಮಿಸಿ ಶ್ರೀ ಮಲ್ಲೇಶ್ವರನ ಲಿಂಗವನ್ನು ಪ್ರತಿಷ್ಠಿಸಿ ತಾನೂ ತಪಸ್ಸುಮಾಡಿ ಹೋದನೆಂದು ಹೇಳುತ್ತಾರೆ. ಈಗಲೂ ಇದನ್ನು ಪರಶುರಾಮ ಗುಹೆಯೆಂದೇ ಕರೆಯುತ್ತಾರೆ.

ಈ ಗುಹೆಯ ಒಳಗನ್ನೆಲ್ಲ ಪರೀಕ್ಷಿಸಿ ಬರಬೇಕೆಂಬ ಅಭಿಲಾಷೆ ಹೆಚ್ಚಾಯಿತು. ಅಸಾಧ್ಯವಾದ ಕತ್ತಲು. ಮುಂದೆ ನೀರೂ ಸಿಕ್ಕುವುದೆಂದು ಹೇಳುತ್ತಾರೆ. ನೀರಿನಲ್ಲಿ, ಕತ್ತಲೆಯ ಮಡಿಲಲ್ಲಿ, ಅಪರಿಚಿತ ಗುಹೆಯಲ್ಲಿ, ಇಲ್ಲಿನ ವಿಷಯ ವನ್ನೇನೂ ಅರಿಯದ ನಾವು ದೊಡ್ಡ ಸಾಹಸಕ್ಕೆ ತೊಡಗಿದ್ದೇವೆ. ಇನ್ನು ಈ ಗುಹೆಯ ಹೃದಯಾಂತರಾಳವನ್ನು ಭೇದಿಸಬೇಕು. ಕತ್ತಲಿನ ಆಳ ಆಳದಲ್ಲಿರುವ ಶ್ರೀ ಮಲ್ಲೇಶ್ವರನನ್ನು ನೋಡಿಯೇ ಬರಬೇಕು ! ಕತ್ತಲಿನ ಪರಶುರಾಮಗುಹೆ ಯನ್ನು ಹೊಕ್ಕು ಬಂದ ಸಾಹಸಿಗಳೆನಿಸಿಕೊಳ್ಳಬೇಕು ! ಅಚಲವಾದ ನಿರ್ಧಾರ! ಕಲ್ಲು, ನೀರು, ಕತ್ತಲಿನೊಡನೆ ಸರಸ ! "ನೋಡಿಯೇ ಬಿಡೋಣ !" ಎಂಬ ಉತ್ಸಾಹಭರಿತ ಆಕಾಂಕ್ಷೆ ! ಗೆಳೆಯರೊಬ್ಬರು ಗೀರುವ ಬೆಂಕಿಯ ಕಡ್ಡಿಯ ಮಂದ ಬೆಳಕಿನಲ್ಲಿ ಸಾಲುಗಟ್ಟಿ ಹೆಜ್ಜೆಗಳನ್ನು ಕಿತ್ತೆವು. ಕರಾಳ ಕತ್ತಲಿನ ಭಯಂಕರ ರೂಪಕ್ಕೆ ಬೆಂಕಿಯ ಕಡ್ಡಿ ಮೂರ್ಛೆಹೋಗುತ್ತಿತ್ತು. ಕಣ್ಣುಗಳ

ಶಕ್ತಿಮಿಾರಿ ದೃಷ್ಟಿಯನ್ನು ಹರಿಸಿದರೂ ಕುರುಡಾಗಹತ್ತಿದವು. ಕಾಲುಗಳು ಮಾತ್ರ ಅಪಾರ ಎಚ್ಚರಿಕೆಯನ್ನು ವಹಿಸಿ, ತಳದ ಶಿಲಾಭಾಗವನ್ನು ನಿಧಾನವಾಗಿ ಉಜ್ಜಿ—ಇಲ್ಲಿ ನಯವಾಗಿದೆ, ಇಲ್ಲಿ ತಗ್ಗಿದೆ, ಇಲ್ಲಿ ಏಣಿದೆ, ಇಲ್ಲಿ ಒಡಕಿದೆ, ಎಂದು ಶರೀರದಾದ್ಯಂತ ಎಚ್ಚರಿಕೆಯನ್ನು ಬಿತ್ತುತ್ತಾ ಎಳೆದೊಯ್ಯುತ್ತಿವೆ. ಆದರೂ ಮುಂದಾಳುತನವನ್ನು ವಹಿಸಿದ್ದ ಕಲಾವಿದ ಮಿತ್ರರು ಸರ್ಪವನ್ನು ಮೆಟ್ಟಿದಂತೆ 'ಅರರೇ' ಎಂದು ಮುಗ್ಗರಿಸಿ, ಹಿಂದೆ ಜಗ್ಗಿದಾಗ–ಬಂಡೆಯೇ ಕುಸಿದು ನಮ್ಮನ್ನು ಅವುಕಿದಂತಾಯಿತು. ತಣ್ಣನೆಯ ನೀರು ಅವರ ಕಾಲನ್ನು ಚುಂಬಿಸಿ ದುದಕ್ಕೆ ಬೆಚ್ಚಿ ಅವರು ಹಿಂದೆ ಸರಿದ ಮೇಲೆ ಮತ್ತೊಬ್ಬರು ನಾಯಕತ್ವ ವನ್ನು ವಹಿಸಿ ನೀರಿಗಿಳಿದರು. ಒಬ್ಬೊಬ್ಬರಾಗಿ ಅವರನ್ನು ಹಿಂಬಾಲಿಸಿದುದಾಯಿತು.

ನಾಲ್ಕಾರು ಬೆಂಕಿಯ ಕಡ್ಡಿಗಳ ಕತೆ ಮುಗಿದ ಮೇಲೆ ನೀರನ್ನು ಪರಿಕ್ಷೀಸುವಲ್ಲಿ ಅದೇನು ಅಷ್ಟು ನಿರ್ಮಲವಾದುದಂತೆ ಕಂಡುಬರದಿದ್ದರೂ, ದುರ್ಗಂಧ ಯುಕ್ತವಾಗಿಲ್ಲದುದನ್ನು ಕಂಡು ಅಚ್ಚರಿಯೇ ಆಯಿತು. ಈ ಅಗಾಧವಾದ ಬಂಡೆಯ ನಡುವೆ ನೀರಿಗೆ ಆವಾಸಸ್ಥಾನವಾದರೂ ಹೇಗೆ ದೊರೆಯಿತೋ-ಅದನ್ನು ಊಹಿಸಲು ನಮಗೆ ಸಾಧ್ಯವಾಗಲೇ ಇಲ್ಲ. ಸದಾಕಾಲವೂ ಜಲಭರಿತವಾಗಿರುವ ಈ ಗವಿಯ ಮಹತ್ವವಾದರೂ ಎಂತಹುದು ಎಂದು ಮೂಕ ವಿಸ್ಮಿತರಾಗಿ ಕೊರೆಯುವ ನೀರಿನಲ್ಲಿ ಅಡಿಗಳನ್ನು ತಳ್ಳತೊಡಗಿದೆವು.

ಗೋಡೆಯ ಆಶ್ರಯದಲ್ಲಿ ತಡವರಿಸಿಕೊಂಡು ಹೋಗುವ ಅಂಧಪತಿಗಳಂತೆ ಗವಿಯಲ್ಲಿ ಮುಂದುವರಿದಂತೆಲ್ಲ ಅದು ಕಿರಿದಾಗುತ್ತಾ ಬಂದು ತಲೆಯನ್ನು ತಗ್ಗಿಸಿ ನಡೆಯುವ ಪರಿಸ್ಥಿತಿ ಕೆಲವಾರು ಹೆಜ್ಜೆಗಳಲ್ಲಿಯೇ ಮನಸ್ಸಿಗೆ ಅಳುಕನ್ನು ತಂದೊಡ್ಡಿತು. ಕೆಳಗಿನಿಂದ ಮಂಡಿಯವರೆಗೂ ಏರಿದ ನೀರು, ಮೇಲಿನಿಂದ ಮುಡಿಯನ್ನು ಅವುಕುತ್ತಿರುವ ಕಡಿದಾದ ಪ್ರದೇಶ. ಗುಹೆಯ ಬಾಗಿಲ ಹಿಂದೆ ಸರಿದು ಸಂಪೂರ್ಣವಾಗಿ ಬೆಳಕಿನ ಬಳ್ಳಿಗಳನ್ನು ಎಳೆದುಕೊಂಡ ಮೇಲೆ ಮುಂದಿನ ದಾರಿ ಅಸಾಧ್ಯವೆಂಬಂತೆಯೇ ತೋರಿತಾದರೂ ನಿರ್ಧಾರ ವನ್ನು ಮುರಿಯುವ ಮನಸ್ಸಿಲ್ಲದೆ, ಮುಂದೆ ಮುಂದೆ ಸರಿಯತೊಡಗಿದೆವು.

ಹೆಬ್ಬಂಡೆಯೊಂದರ ಉದರದಲ್ಲಿ ಅನಂತವಾದ ಕಾಳ್ಗತ್ತಲ ನಡುವಿನಲ್ಲಿ ಹೆಜ್ಜೆ ಹೆಜ್ಜೆಗೂ ಏರುತ್ತಿರುವ ನೀರಿನಲ್ಲಿ ಸಾಗುವಾಗ–ಗುಹೆ ಮತ್ತೂ ಕಡಿದಾಗುತ್ತಾ ಬಂದು ಮೂಗು ನೀರಿನ ಮಟ್ಟಕ್ಕೆ ಮುತ್ತಿಡುವ ಸ್ಥಿತಿ ಸನಿಹವಾಗ ತೊಡಗಿದಾಗ, ಶ್ರಮವಾದರೂ ಸಹಿಸಿಕೊಂಡು, ಭಯವಾದರೂ ತಡೆದುಕೊಂಡು, 'ಸರ್–ಬರ್' ಎಂದು ಕಿವಿಯ ಬಳಿಯೇ ಹಾರಿಯೋಗುವ ಬಾವುಲಿಗಳ ಹೊಡೆತಕ್ಕಂಜಿ ಕತ್ತಲಾದರೂ ಕಣ್ಣನ್ನು ಎರಡು ಕೈಗಳಲ್ಲಿ ಮುಚ್ಚಿಕೊಂಡು ಮುಂದುವರಿಯುತ್ತಿರುವ ನಾವು ಸಾಹಸಿಗರೇ ಸರಿ ! ಆದರೆ ಮನಸ್ಸಿನಲ್ಲಿ ತಳಮಳವೆದ್ದಿದೆ. ಬಟ್ಟೆಗಳು ತೊಯ್ದುಹೋಗುವುದರಲ್ಲಿವೆ. ಮುಖಕ್ಕೆ ನೀರಿನ ಪ್ರೋಕ್ಷಣೆಯಾಗುವುದರಲ್ಲಿದೆ ಆಗಲೇ ತೇಲಿ ಬಂದಿತು ಆ ಅಮೃತವಾಣಿ.

"ಗಾಳಿಯಲ್ಲಿ ಆಮ್ಲಜನಕ ಕುಗ್ಗುತ್ತಾ ಬಂದಿದೆ ; ಉಸಿರು ಕಟ್ಟಿಕೊಳ್ಳುತ್ತಿದೆ ; ಇನ್ನೂ ಮುಂದೆ ಹೋದರೆ ಅಪಾಯ ಖಂಡಿತ !" ಮುಂದಾಳುವೇ ನುಡಿದಮೇಲೆ ನಮ್ಮ ಶಕ್ತಿ ಕುಂದಿಹೋಯಿತು. "ತೇನ್‌ಸಿಂಗ್ ಎವರೆಸ್ಟ್ ಶಿಖರವನ್ನು ಹತ್ತಿರಬಹುದು ; ಬೆಳಕೊಂದಿದ್ದರೆ ಯಾವ ಸಾಹಸವನ್ನಾದರೂ ಎಸಗಬಹುದು ; ಆದರೆ, ಕತ್ತಲಿನೊಡನೆ ಹೋರಾಡುವ ಸಾಹಸ ದೊಡ್ಡದು ! ಇಷ್ಟು ದೂರವನ್ನಾದರೂ ಜಯಿಸಬಲ್ಲ ಸಾಹಸಿಗಳಾರು !"

ಹೌದು, ನಮ್ಮ ನಮ್ಮಲ್ಲಿಯೇ ಸಮಾಧಾನದ ಮಾತುಗಳನ್ನಾಡಿಕೊಂಡು ಅಲ್ಲಿಗೆ ಹತ್ತಿರದಲ್ಲಿಯೇ ಇದ್ದ ಬಸವನ ವಿಗ್ರಹಕ್ಕೆ ಗಂಧದ ಕಡ್ಡಿಯನ್ನು ಹಚ್ಚಿ, ಉಳಿದ ಕರ್ಪೂರವನ್ನು ತೇಲಿಬಿಟ್ಟು "ಜೈಮಲ್ಲೇಶ್ವರ" ! ಎಂದು ನಿಂತಲ್ಲಿಯೇ ಘೋಷಿಸಿ ನಮ್ಮ ವಿಜಯ ಯಾತ್ರೆಯ ಮುಕ್ತಾಯಗೀತೆಯನ್ನುಲಿಯಬೇಕಾಯಿತು.

......ಗವಿಯ ದ್ವಾರವನ್ನು ಸೇರಿದಾಗ ಹೊರಗಿನ ಗಾಳಿ ಹರ್ಷಪುಳಕವನ್ನುಂಟುಮಾಡುವ ನೆವದಲ್ಲಿ ಕಚಗುಳಿಯಿಟ್ಟು "ಕೊನೆಗೂ ಸೋತಿರ !" ಎಂದು ಅಣಕಿಸುವಂತಿದ್ದರೂ ಹೊರಬಂದ ನಮ್ಮ ಮೇಲಿನ ಯಾವುದೋ ಅಗಾಧವಾದ ಹೊರೆಯನ್ನು ಇಳುಹಿದಷ್ಟು ಸಂತಸವಾಯಿತು. ನೀರಿನ ತಳದಿಂದ ಮೇಲೆತ್ತಿ ತಂದಂತೆ ಕಟ್ಟಿಕೊಂಡಿದ್ದ ಉಸಿರು ಸರಾಗವಾಯಿತು. ದೃಷ್ಟಿ ಚೇತರಿಸಿಕೊಂಡಿತು. ಆದರೆ ನಮ್ಮ ಕರ್ತವ್ಯದಲ್ಲಿ ನಾವು ವಿಜಯಿ

ಗಳಾಗಲಿಲ್ಲ. ನಮ್ಮ ಸಾಹಸಕ್ಕೆ ಫಲ ದೊರೆಯಲಿಲ್ಲ. ಆದರೂ ಈ ಅದ್ಭುತವಾದ ಗುಹೆಯನ್ನು ಹೊಕ್ಕು ಬಂದೆವು. ಇದರ ಅಗಾಧತೆಯನ್ನು ಅರಿತುಕೊಂಡೆವು. ಅಪಾರವಾದ ಗಿರಿಶ್ರೇಣಿಯ ನಡುವೆ, ಅಸಾಧ್ಯವಾದೊಂದು ಅದ್ಭುತ ಗವಿಯಲ್ಲಿ ಮಲ್ಲೇಶ್ವರನ ದರ್ಶನವನ್ನು ಪಡೆಯಲು ಅಪೂರ್ವವಾದ ಭಕ್ತಿ, ನಿಷ್ಠೆ, ತ್ಯಾಗ, ಜೊತೆಗೆ ಧೈರ್ಯ ಸಾಹಸಗಳೂ ಬೇಕಿವೆಯೇನೋ! ಈ ಗುಣಗಳಲ್ಲಿ ಯಾವುದಕ್ಕೆ ನಮ್ಮಲ್ಲಿ ಕುಂದಿದ್ದಿತೋ ಅಂತು ಮಹೇಶ್ವರನ ದರ್ಶನ ಭಾಗ್ಯ ಲಭಿಸಲಿಲ್ಲ!

ಬಿಸಿಲಿನ ಪ್ರಖರತೆ ಹೆಚ್ಚಾಯಿತು. ಇನ್ನು ಇಲ್ಲಿ ನಿಂತರೆ ಅರ್ಚಕ ಮಹಾಶಯನೇನಾದರೂ ಇತ್ತ ದಯಮಾಡಿಸಿದರೆ ಅಪ್ಪಣೆಯಿಲ್ಲದೆ ಬಾಗಿಲು ತೆರೆದುದಕ್ಕೆ ಶಿಕ್ಷೆ ವಿಧಿಸುತ್ತಾನೆ. ಈ ಗಿರಿಯಲ್ಲಿ ಕುಡಿಯುವ ನೀರು ದೊರೆಯಬೇಕಾದರೆ ಅರ್ಧ ಮೈಲಿಯ ದೂರ ಬೆಟ್ಟವನ್ನು ಇಳಿದು ಹೋಗಬೇಕು. ಇನ್ನು ಬಂದ ದಾರಿಯನ್ನು ಹಿಡಿಯುವುದೇ ಒಳ್ಳೆಯದು.

ಇದೊಂದು ವೃದ್ಧಗಿರಿ. ಇಲ್ಲಿನ ಬಂಡೆಬಂಡೆಯೂ ನೀರು ನಿಂತ ನೆಲ ಒಣಗಿ ಬಿರುಕು ಬಿಡುವಂತೆ ಸುಲಿದು ನಿಂತಿವೆ. ಅಷ್ಟೇನೂ ಉನ್ನತವಾದ ಶೈಲವಿದಲ್ಲದಿದ್ದರೂ ಶ್ರೇಣಿ ಅಗಾಧವಾದುದು. ಎತ್ತಣಿಂದ ಬಂದರೂ ಬಳಸಿಯೇ ಬರಬೇಕು; ಬಳಲಿಯೇ ಬರಬೇಕು. ಅಲ್ಲದೆ ಆಲತಿ ಗ್ರಾಮದ ಕಡೆಯಿಂದ ಒಳ್ಳೆಯ ಮೆಟ್ಟಲುಗಳಿವೆ. ಆದರೂ ಆಯಾಸವಾಗುತ್ತದೆ. ಇಲ್ಲಿ ಸುಂದರವಾದ ದೇವಾಲಯವಿಲ್ಲ. ಶಿಲ್ಪ ಚಾತುರ್ಯದಿಂದ ಮೆರೆಯುವ ವಿಗ್ರಹಗಳಿಲ್ಲ. ಗುರುಮಠವಿಲ್ಲ. ಇದೊಂದು ನಿರ್ಜನ ಪ್ರದೇಶ. ಗಂಟೆಯ ನಾದವಿಲ್ಲ. ಇದೊಂದು ನೀರವ ಪ್ರದೇಶ. ಸದಾ ಭಯಭೀಕರತೆ ತಾಂಡವ ಮಾಡುತ್ತದೆ. ಆದರೂ ಈ ಪ್ರದೇಶದಲ್ಲಿ ಒಮ್ಮೆ ಸಂಚರಿಸಿ ಹಿಂದಿರುಗುವಾಗ ಯಾವುದೋ ಆತ್ಮೀಯ ವಸ್ತುವನ್ನು ತೊರೆದು ಹೋಗುವಷ್ಟು ನೋವಾಗುತ್ತದೆ. ಗಿರಿಗಾಡಿನ ರಮಣೀಯತೆ ಮನಸ್ಸನ್ನು ಅರಳಿಸಿದರೂ ದೇಹಮಾತ್ರ ಬಳಲಿ ನಿಲ್ಲುತ್ತದೆ. ದುರ್ಬಲ ಶರೀರಗಳಿಗಿಲ್ಲಿ ಎಡೆಯಿಲ್ಲ. ಚಂಚಲ ಹೃದಯಿಗಳಿಗೂ ಎಡೆಯಿಲ್ಲ. ಇಲ್ಲಿಗೇರಲು ಶಕ್ತಿಯೊಂದೇ ಸಾಲದು, ಧೈರ್ಯ, ಶಾಂತಿ, ಸಂಯಮಗಳೂ ಬೇಕು. ಒಬ್ಬೊಬ್ಬರು ಬಂದು ಹೋಗುವ ಎಡೆಯೇ ಇದಲ್ಲ. ಆದರೂ ಬಂದು ಹೋಗುವ ಭಕ್ತರಿದ್ದಾರೆ. ಗವಿಯನ್ನು ಹೊಕ್ಕು ಮಲ್ಲೇಶ್ವರನ

ದರ್ಶನವನ್ನು ಪಡೆದೇ ಹೋಗುವರೆಂದು ಹೇಳುತ್ತಾರೆ. ಆಲತಿಗಿರಿಗೆ ಯಾತ್ರೆ ಹೋಗುವವರು ಸುತ್ತಣ ಹಳ್ಳಿಗಾಡಿನ ಜನರು ! ದೇವರೆಂದರೆ ಯಾವ ಅಸಾಧ್ಯ ಕಾರ್ಯಕ್ಕೂ ಕೈ ಹಚ್ಚಬಲ್ಲ ಧೀರರು. ಆದರೆ ನಾವು ನಿರ್ಭಾಗ್ಯರು ! ಆದರೂ ಈ ಯಾತ್ರೆಯಿಂದ ಹರ್ಷಿತರಾಗಿದ್ದೇವೆ.

# ನಿಸರ್ಗದ ಬೀಡು

ಉನ್ನತವಾದ ಭವ್ಯವಾದ ಧೀರಗಿರಿ ರಸ್ತೆಯ ಬಲಬದಿಯಲ್ಲಿ ನೋಡುವ ಕಣ್ಣಿಗೆ ಸ್ವರ್ಗದ ಕನಸನ್ನು ನೇಯುತ್ತದೆ. ಮನಸಿನ ಪರದೆಯ ಮೇಲೆ ಹರ್ಷದ ತೆರೆತೆರೆಗಳನ್ನು ಚಿಮ್ಮುತ್ತದೆ. ಶ್ರೀ ಆದಿಚುಂಚನಗಿರಿಯನ್ನು ನೆನೆದಾಗಲೆಲ್ಲಾ ಮೈರೋಮಾಂಚನಗೊಳ್ಳುತ್ತದೆ ! ಅಲ್ಲಿನ ತಿಳಿಗೊಳ ಅಲ್ಲಿನ ಹಸಿರ ವೃಕ್ಷರಾಜಿ, ಕಮಲ ಸರೋವರವನ್ನಡರಿ ಬೆಳೆದ ಹೊದರುಗಳು, ಬಂಡೆಗಳು ಮೈಸವರಿ ಹರಿದಿರುವ ಕಾಲು ಹಾದಿಗಳು, ಮಂಟಪಗಳು, ಚೊಕ್ಕವಾದ ತೇರುಬೀದಿ ! ಅಲ್ಲಿಂದ ಮೇಲೇರುವ ಸ್ವರ್ಗದ ಏಣಿ–ಹಂತದ ಸಾಲು ! ಎಂಥ ದಿವ್ಯವಾದ ತಪ್ಪಲು ! ತಪ್ಪಲಂತಿರಲಿ, ಮುಡಿನೆಗಹಿ ಮೇಲೆ ನೋಡು ! ಮನೋಹರ ಗಿರಿ ಶ್ರೇಣಿ ! ಮುಗಿಲ ಹೊರೆಯನ್ನೆಲ್ಲ ಬಾಚಿ ತಬ್ಬಿಕೊಳ್ಳುವಂತೆ ತನ್ನೆರಡು ಶಿಖರ ಗಳನ್ನೂ ಮೇಲೆ ಚಾಚಿ ದಿಟ್ಟ ಹರಿಯುವವರೆಗೂ ಬೆಳೆದು ನಿಂತ ಮಹೋನ್ನತ ಗಿರಿ ; ಚುಂಚನಗಿರಿ !

ಶ್ರೀ ಆದಿಚುಂಚನಗಿರಿ ಮಂಡ್ಯ ಜಿಲ್ಲೆಯ ನಾಗಮಂಗಲ ತಾಲ್ಲೂಕಿನಲ್ಲಿ ಮಾಯಸಂದ್ರದ ಮಾರ್ಗದಲ್ಲಿದೆ. ಅತ್ತ ಕಡೆಯಿಂದ ತುಮಕೂರು ಜಿಲ್ಲೆಯೂ ಶ್ರೀ ಗಿರಿಯ ಪದತಲವನ್ನು ಸಮೀಪಿಸಿಕೊಂಡಿದೆ. ಬೆಳ್ಳೂರಿನಿಂದ ಸುಮಾರು ಒಂದು ಮೈಲಿಯ ಅಂತರದಲ್ಲಿ ಮೂಡಣದಿಸೆಗೆ ಅಗಾಧವಾದ ಗಿರಿಶ್ರೇಣಿ ದಿಗ್ದಿ ಗಂತಗಳನ್ನು ಚಾಚಿ ನಿಂತಿರುವುದನ್ನು ಆ ಮಾರ್ಗವಾಗಿ ಪ್ರಯಾಣ ಮಾಡು ವವರು ಕಾಣುತ್ತಾರೆ. ಈ ಬೆಟ್ಟದ ಸಾಲಿನಲ್ಲಿ ಒಂದೆರಡು ಮೈಲಿಗಳ ಮುಂದೆ ಸ್ವಲ್ಪ ಈಶಾನ್ಯಕ್ಕೆ ಉನ್ನತಾಕಾರದ ಒಂದು ಸುನೀಲಗಿರಿ ಮುಗಿಲಿಗೆ ಮುಡಿ ಯನ್ನು ಚಾಚಿ ನಿಂತಿರುವುದನ್ನು ಕಾಣುವ ಕಣ್ಣು ತೃಪ್ತಿಪಟ್ಟೀತು ! ಆ ಗಿರಿಯ ಧೀರ ಗಂಭೀರತಮ ಆಕಾರ, ಅದರ ಮೇಲೆ ಉರಿಬಿಸಿಲಿನಲ್ಲಿಯೂ ಎದ್ದು ಕಾಣುವ ಸುಶಾಂತಿ, ಮನೋಲ್ಲಾಸವನ್ನುಂಟುಮಾಡುವ ಸುನೀಲವರ್ಣ ಯಾವ ಮನಸ್ಸಿಗೆ ಹರ್ಷವನ್ನು ತಾರವು.

ಸುತ್ತ್ತಮುತ್ತಲೂ ಈ ಗಿರೀಶ್ವರನ ವೈಗಾವಲಿಗೆ ನಿಂತಂತೆ ಹಬ್ಬಿ ಹರಡಿಕೊಂಡಿರುವ ಬೆಟ್ಟದೊಟ್ಟಿಲು; ಅನಂತ ಆಕಾಶದಲ್ಲಿ ಶ್ರೀ ಗಿರಿಯ ಮಧುರ ಭಾವನೆಗಳಂತೆ ಸತತವೂ ಸಾಗುವ ಅಭ್ರಾಳಿಗಳು; ನಡುವೆ ಬೃಹನ್ನಂದಿಯ ಮುಡಿಯಂತೆ ಗೋಚರಿಸುವ ಚುಂಚನ ಗಿರಿಯನ್ನು ತುಮಕೂರಿನ ಕಡೆ ಸಾಗುವ ಯಾವ ಪಯಣಿಗನು ಕಾಣನು !

ಚುಂಚನ ಹಳ್ಳಿಯ ಬಳಿ ಬಸ್ಸಿನಿಂದಿಳಿದು ಬಲಕ್ಕೆ ತಿರುಗಿ ಉದ್ದಕ್ಕೂ ಹಬ್ಬಿರುವ ಕರಿಯ ಕಲ್ಲಿನ ಗುಡ್ಡದ ನೆರೆಯಲ್ಲಿಯೇ ನಡೆದುಬಂದರೆ ಕಣ್ಣೆದುರಿನಲ್ಲಿಯೇ ವೈಭವಯುತವಾದ ಶ್ರೀ ಚುಂಚನಗಿರಿ ಮಹಾಕ್ಷೇತ್ರ ಭೂಮಿಯಿಂದ ಮುಗಿಲಿನವರೆಗೂ ಹಬ್ಬಿದಂತೆ ಕಾಣುವ ನೋಟ ಅಪೂರ್ವವಾದುದು. ಬಟ್ಟಬಯಲಿನಿಂದ ಆರಂಭವಾಗಿ ಗಿರಿಮಲೆಗಳು, ಹೆಬ್ಬಂಡೆಗಳು, ನಡು ಬೆಟ್ಟದಲ್ಲಿ ಗೋಚರಿಸುವ ನವನಾಗರಿಕ ಕಟ್ಟಡಗಳು, ಇನ್ನೂ ಮೇಲೆ ಎತ್ತರವಾದ ದೇಗುಲ, ಮತ್ತೆ ದೃಷ್ಟಿ ಮೇಲೆ ಹರಿದಂತೆ ಆಗಾಧವಾದ ಬಂಡೆಯೊಂದರ ಭಯಂಕರ ಅಕ್ಷಿಯಂತೆ ಕಾಣುವ ಸಿದ್ಧೇಶ್ವರನ ಗವಿ, ದಕ್ಷಿಣೋತ್ತರವಾದ ಎರಡು ಶಿಖರಗಳ ನೆತ್ತಿಯಲ್ಲಿ ನಿಲ್ಲಿಸಿರುವ ಸೂಜಿ ಮಾತ್ರದಲ್ಲಿ ಕಂಡೂ ಕಾಣದಂತೆ ಮುಗಿಲಿನಲ್ಲಿ ಲೀನವಾಗಿ ಗೋಚರಿಸುವ ಗಳಿಗೆಗಲ್ಲು, ಜೋಳೂರು ಸ್ತಂಭಗಳು, ಗಿರಿಯ ನೆರೆಹೊರೆಯಲ್ಲಿ ತಾನೇ ತಾನಾಗಿರುವ ಗಿಡಮರಗಳು–ಎಂಥ ಬಂಧುರ ದೃಶ್ಯಾವಳಿ ! ಸೌಂದರ್ಯ ರಸವರ್ಷದಲ್ಲಿ ಮಿಂದು ಒಂದೆರಡು ಫರ್ಲಾಂಗುಗಳು ಮುಂದೆ ಹೋದರೆ ಸೊಂಪು ತಂಪಿನ ಅಮೃತ ಹಸ್ತವನ್ನು ಬರುವವರೆಡೆಗೆ ಚಾಚಿ ಆಹ್ವಾನಿಸುವ ಶ್ರೀ ಗಿರಿಯ ತಪ್ಪಲಿನ ನಿಬಿಡ ವೃಕ್ಷರಾಜಿ ಕೆಲಕಾಲ ಮೌನಮುಗ್ಧರನ್ನಾಗಿಸುತ್ತದೆ. ನಿರ್ಜೀವ ಬಂಡೆಗಳನ್ನಡರಿ ಅವಕ್ಕೊಂದು ಜೀವಕಳೆಯನ್ನು ತಂದಿರುವ ಆ ಅನಂತವಾದ ಹಸಿರಬಳ್ಳಿಗಳು, ಎತ್ತ ನೋಡಿದರೂ ಆಳೆತ್ತರಕ್ಕೆ ಬೆಳೆದು ಸೊಂಪೆಸೆಯುವ ತರುರಾಜಿಗಳು, ಮುಂದುವರಿದಂತೆಲ್ಲ ಕಣ್ಣಿಗೆಸೆಯುವ ನಿರ್ಮಲ ಸರುತಟಾಕಗಳು, ನೆರೆನೆರೆಯಲ್ಲಿಯೇ ಹೆಮ್ಮರಗಳ ಮಾತೃಮಮತೆಯಲ್ಲಿ ಪವಡಿಸಿ ಮೆಲುಕುವ ಗೋವುಗಳು, ತರುಮರಗಳ ಸಂದಿನಿಂದಲೇ ನುಸುಳಿಬಂದು ಹರ್ಷವನ್ನು ತರುವ ದನಗಾಹಿಯ ಹರ್ಷಗೀತ; ಪಯಣಿಗ ಬೆರಗಾಗಿ ನಿಲ್ಲುತ್ತಾನೆ! ಇದ್ದಕ್ಕಿದ್ದಂತೆಯೇ 'ಕಿಯಾವ್ ಕಿಯಾವ್' ಎಂದು ಕಿವಿನಿಮಿರುವಂತೆ ಕೇಳಿಬರುವ ನವಿಲುಲಿ;

ಸುತ್ತಲೂ ನೋಡುವಲ್ಲಿ ಹಿಂಡು ಹಿಂಡಾಗಿ ಬಂಡೆಯ ನೆರೆಯಲ್ಲಿ ಹಾಯುವಬಣ್ಣ ಬಣ್ಣದ ಅಸಂಖ್ಯಾತ ನವಿಲುಗಳು; ಮರಮರದ ಮಡಿಲಲ್ಲಿ ಆನಂದಪರವಶತೆಯಲ್ಲಿ ಮಗ್ನವಾಗಿ ಕುಕಿಲಿಡುವ ಖಗಾಳಿಗಳು; ಯಾವ ನಿರ್ಬಂಧವೂ ಇಲ್ಲ, ಇದು ನಮ್ಮ ರಾಜ್ಯ ಎಂದು ಸ್ವೇಚ್ಛೆಯಾಗಿ ಅಲೆಯುವ ವಾನರರು; 'ಚಿಳೀಕ್–ಚಿಳೀಕ್' ಎಂದು ಚೀರಿ ದಂಗುಬಡಿಸುವ ಅಳಿಲು ಗಾಯಕರು; ಇನ್ನೂ ಮುಂದೆ ಸಾಗಿ ನಿಂತರೆ ವಿಶಾಲವಾದ ಸರುವೊಂದರಲ್ಲಿ ಅಪಾರವಾಗಿ ಅರಳಿನಿಂತ ಕೆಂದಾವರೆಯ ಪ್ರಸನ್ನವದನಗಳು; ತೇರುಬೀದಿಯ ಇಕ್ಕೆಲದಲ್ಲಿಯೂ ಸಾಲು ಸಾಲಾಗಿ ನಿಂತಿರುವ ಪುರಾತನ ಮಂಟಪಗಳು; ಅಲ್ಲಲ್ಲೇ ಜಾತ್ರೆಯ ಕಾಲದ ಯಾತ್ರಾರ್ಥಿಗಳ ಸೌಲಭ್ಯಕ್ಕಾಗಿ ಕಟ್ಟಿರುವ ಕೆರೆಗಳು, ಗಿರಿಯ ನೆರೆಯನ್ನು ಸೇರಿದಂತೆಯೇ ಸ್ವರ್ಗಕ್ಕೇರಿರುವ ಮೆಟ್ಟಲುಗಳು; ಅಲ್ಲಿಂದ ಮತ್ತೊಮ್ಮೆ ಹಿಂದೆ ನೋಡಿದರೆ ಬಸವಣ್ಣನ ಮಂಟಪದವರೆಗೂ ವಿಶಾಲವಾಗಿ ಹಬ್ಬಿರುವ ಹಚ್ಚ ಹಸಿರ ಹುಲ್ಲುಹಾಸು! ಅಪೂರ್ವವೂ ಅಸಾಮಾನ್ಯವೂ ಆದ ತಪ್ಪಲಿನ ಸೌಂದರ್ಯದಿಂದ ಪುಳಕಿತನಾದ ಪಯಣಿಗ, ಹರ್ಷಚಿತ್ತದಿಂದ ಮೆಟ್ಟಲುಗಳನ್ನೇರಿ ಶಿವದರ್ಶನಕ್ಕೆ ಹೊರಟರೆ......ಉನ್ನತವಾದ ಗಿರಿಯನ್ನೇರಲು ಅವನಿಗೆ ಆಯಾಸವೇ ತೋರದು.

ನಡುಬೆಟ್ಟದ ಶ್ರೀ ಮಠದಿಂದ ಮೇಲೆ ಶ್ರೀ ಗಂಗಾಧರೇಶ್ವರ ದೇವಾಲಯಕ್ಕೆ ಹೋಗಲು ಅಂದವಾದ ಮೆಟ್ಟಲುಗಳಿವೆ. ನೂರಾರು ಮೆಟ್ಟಲುಗಳನ್ನು ಹತ್ತಿ ಹೋಗುವಾಗ ಅಲ್ಲಿಯೂ ಅಕ್ಕಪಕ್ಕದಲ್ಲಿ ದೊಡ್ಡ ದೊಡ್ಡ ವೃಕ್ಷಗಳು ಬೆಳೆದು ಕೊಂಡು ಮೆಟ್ಟಲುಗಳ ಮೇಲೆ ಒಂದು ಹಸಿರ ಕಾನನವನ್ನೇ ಕವಿಸಿವೆ. ಬೆಟ್ಟದ ಮೇಲೆಯೂ ಇಂಥ ಉನ್ನತ ವೃಕ್ಷಗಳು ಬೆಳೆದಿರುವುದು ಅಚ್ಚರಿಯೆ ಸರಿ. ಸ್ವಲ್ಪ ಮೇಲೆ ಹೋದರೆ ಬೃಹದಾಕಾರದ ಬಸವಣ್ಣನ ವಿಗ್ರಹವೊಂದನ್ನು ಬಂಡೆಯೊಂದರ ಮೇಲೆ ಕೆತ್ತಿರುವುದು ಬಲಪಾರ್ಶ್ವದಲ್ಲಿ ಕಾಣಿಸುತ್ತದೆ. ಅಲ್ಲಿಂದ ನೇರವಾಗಿ ಮೆಟ್ಟಲುಗಳನ್ನೇರಿ ಹೋದರೆ ಶ್ರೀ ಗಂಗಾಧರೇಶ್ವರನ ಭವ್ಯದೇಗುಲ ದೊರೆಯುತ್ತದೆ. ಬಹಳ ವಿಸ್ತಾರವಾದ ಈ ದೇವಾಲಯದಲ್ಲಿ ಆ ಗಂಗಾಧರೇಶ್ವರನ ಲಿಂಗ ಪ್ರತಿಷ್ಠೆಯಾಗಿದೆ. ವರ್ಷಂಪ್ರತಿ ಭಕ್ತಾದಿಗಳು ಅಸಂಖ್ಯಾತವಾಗಿ ಬಂದು ಪೂಜೆ ಸಲ್ಲಿಸಿ ಹೋಗುತ್ತಾರೆ.

ಇಲ್ಲಿಂದ ಮೇಲೆ ಹೋದಂತೆ ದೊಡ್ಡ ಬಂಡೆಯೊಂದರಲ್ಲಿ ನೈಸರ್ಗಿಕವಾದ ಗವಿಯೊಂದು ಏರ್ಪಟ್ಟು ಅಲ್ಲಿ ಶ್ರೀ ಸಿದ್ಧೇಶ್ವರಲಿಂಗ ಪ್ರತಿಷ್ಠೆ ಮಾಡಿದ್ದಾರೆ. ಕಲ್ಲುಗಳ ಸಂದುಗಳಲ್ಲಿ ಹಾದು, ಕಡಿದಾದ ಸ್ಥಳಗಳಲ್ಲಿ ಹತ್ತಿ ಇಲ್ಲಿಗೆ ಬರಲು ಸ್ವಲ್ಪ ಶ್ರಮವೇ ಆಗುತ್ತದೆ. ಇನ್ನು ಗಿರಿಯ ಎರಡು ಶಿಖರಗಳಾದ ಆಕಾಶ ಭೈರವ ಮತ್ತು ಚೋಳೂರು ಸ್ತಂಭಗಳನ್ನು ಮುಟ್ಟಿಬರಲು ಸಾಹಸಿಗಳೇ ಆಗ ಬೇಕು. ಗಿರಿಯ ತುತ್ತ ತುದಿಯಲ್ಲಿ ಆಕಾಶ ಭೈರವಸ್ತಂಭವನ್ನು ಸ್ಥಾಪಿಸಿ ದ್ದಾರೆ. ತುಂಬ ಅಪಾಯಕಾರಿಯಾದ ಬಂಡೆಗಳ ಮೇಲೆ, ಅತಿ ಕಡಿದಾದ ಪ್ರದೇಶದಲ್ಲಿ ಮೇಲೇರಿ ಬಂದರೆ ಮತ್ತೊಂದು ಎತ್ತರವಾದ ನಿಡುಬಂಡೆ ದೊರೆಯು ತ್ತದೆ. ಇದರ ಬುಡದಲ್ಲಿ ಗಿರಿಯ ತಳವನ್ನು ತೋರುವ ಭಯಂಕರ ಪ್ರಪಾತ ಗಳು ಮೈ 'ಜುಂ' ಎನ್ನಿಸುತ್ತವೆ. ಇವುಗಳ ಅಡ್ಡಲಾಗಿ ಒಂದು ಹಾಯಿ ಬಂಡೆ ಯಿದೆ ಅದರ ಮೇಲೆ ನಿಂತು ಮೇಲಿಂದ ಇಳಿಬಿದ್ದಿರುವ ಸರಪಳಿಯನ್ನು ಹಿಡಿದು ಮರ ಹತ್ತುವಂತೆ ಹತ್ತಾರು ಗಜಗಳನ್ನು ಏರಬೇಕು. ಅಜಾಗರೂ ಕತೆಯಿಂದ ಕೈ ತಪ್ಪಿದರೆ ಮತ್ತೆ ಬದುಕಿ ಬರುವ ಸಂಭವವೇ ಇಲ್ಲ. ಶಿವರಾತ್ರಿ ಜಾತ್ರೆಗಳ ಕಾಲದಲ್ಲಿ ನೂರಾರು ಜನ ಬಂಡೆಯನ್ನು ಏರಿ ಆಕಾಶ ಭೈರವನ ಪೂಜೆಮಾಡಿ, ಹರಕೆಗಳನ್ನು ಸಲ್ಲಿಸಿ ಹೋಗುತ್ತಾರೆ. ಆದರೆ ಇದುವರೆಗೂ ಯಾರಿಗೂ ಯಾವ ವಿಧವಾಥ ಅಪಾಯವೂ ಸಂಭವಿಸದಿರುವುದು ಆಶ್ಚರ್ಯದ ವಿಷಯವೇ ಸರಿ. ರಾತ್ರಿಯ ಕಾಲದಲ್ಲಿ ಇಲ್ಲಿಗೆ ಶ್ರವಣಬೆಳುಗೊಳ, ಮೇಲು ಕೋಟೆ, ಚಾಮುಂಡಿಬೆಟ್ಟ ಮುಂತಾದುವುಗಳ ಮೇಲಿನ ಬೆಳಕು ಗೋಚರಿಸು ವುದಾಗಿ ನೋಡಿದವರು ಹೇಳುತ್ತಾರೆ.

ಇಷ್ಟು ಅಪಾಯಕಾರಕವಲ್ಲವಾದರೂ ಸ್ವಲ್ಪ ದುಸ್ಸಾಧ್ಯವಾದುದೇ ಎನಿಸಿಕೊಳ್ಳುವ ಚೋಳೂರು ಸ್ತಂಭದೆಡೆಗೆ ಹೋಗಿಬರಲು ಧೈರ್ಯ ಸಾಹಸಗಳು ಬೇಕು. ನೆತ್ತಿಯ ನಡುವೆ ಅಗಾಧವಾದ ಕತ್ತಲಮಡುವಿನಂತಿರುವ ಗವಿ ಯೊಂದರಲ್ಲಿ ಶ್ರೀ ಕತ್ತಲ ಸೋಮೇಶ್ವರ ಲಿಂಗ ಪ್ರತಿಷ್ಠೆಯಾಗಿದೆ. ಇಲ್ಲಿನ ಕತ್ತಲೆ ಗಂಜಿ ಅನೇಕರು ಅಲ್ಲಿಗೆ ಹೋಗುವುದೇ ಇಲ್ಲ. ಆದಿಗಂಗಾಧರೇಶ್ವರ, ಚಂದ್ರ ಮೌಳೇಶ್ವರ, ಸೋಮೇಶ್ವರ, ಮಲ್ಲೇಶ್ವರ, ಗವಿಸಿದ್ಧೇಶ್ವರ ಮುಂತಾಗಿ ಈಶ್ವರನ ಪಂಚಪ್ರಾಣಲಿಂಗ ದರ್ಶನವೂ ಈ ಕ್ಷೇತ್ರದಲ್ಲಿ ದೊರೆಯುತ್ತದೆ.

ಮಠ, ದೇವಾಲಯ, ಸರೋವರಾದಿಗಳು ಗಿರಿಯ ಮಧ್ಯಭಾಗದಲ್ಲಿವೆ. ಮಠದ ಆವರಣದಲ್ಲಿ ನಾಗಚಾವಡಿ, ಮಂಟಪ, ಭವ್ಯಭವನ, ಭೈರವನ ಗುಡಿ, ಶಿವಸಾಯುಜ್ಯವನ್ನು ಪಡೆದ ಪೀಠಾಧಿಕಾರಿಗಳ ಸಮಾಧಿಗಳು ಇವೆ. ಶ್ರೀ ಮಠದ ನೆರೆಯಲ್ಲಿಯೇ ಮನೋಹರವಾದ ಒಂದು ಸರೋವರವೂ ಇದೆ. ಅಲ್ಲದೆ ಅನೇಕ ಶಾಸನಗಳೂ, ವೀರಗಲ್ಲುಗಳೂ ಈ ಕ್ಷೇತ್ರದಲ್ಲಿ ದೊರೆಯುತ್ತವೆ.

ಇನ್ನೂ ಬೆಟ್ಟವನ್ನು ಸುತ್ತಿ ಒಮ್ಮೆ ನೋಡಿ ಬಂದರೆ ಹಿಂಬದಿಯಲ್ಲಿ 'ಮೇದರಗುಡ್ಡ' ಎಂಬಲ್ಲಿ ನಿಂತು ಕೂಗಿದರೆ ನಿರ್ದಿಷ್ಟವಾದೊಂದು ಪ್ರದೇಶದಿಂದ ಕೇಳಿಬರುವ ಸ್ಪಷ್ಟವಾದ ಧ್ವನಿ ಮತ್ತೆಲ್ಲಿಯೂ ಕೇಳಿಬರದೆಂದು ಹೇಳುತ್ತಾರೆ. ಇಲ್ಲಿ ಶ್ರೀ ಗಂಗಾಧರನ ಅಸ್ತಿತ್ವವನ್ನು ಗುರುತಿಸಿದ ಮೇದರವನೊಬ್ಬನು ಮಡಿದ ನೆಂದು ಪ್ರತೀತಿ. ಇನ್ನೊಂದು ಪಾರ್ಶ್ವದಲ್ಲಿ ಅತ್ಯಂತ ಎತ್ತರವಾದ ನಾಗರ ಹೆಡೆಯಾಕಾರದ ಒಂದು ಬಂಡೆ ನೋಡುವವರಿಗೆ ಭಯವನ್ನುಂಟುಮಾಡು ವಂತಿದೆ. ಹೀಗೆಯೇ ಆಶ್ಚರ್ಯಕರವಾದ ಅಜ್ಜಿಯ ಗುಡ್ಡೆ, ಸೀಳುಬಂಡೆ ತಪೋಗುಹೆ ಮುಂತಾದವೂ ಇವೆ.

ಪ್ರಕೃತಿ ವೈಚಿತ್ರ್ಯಗಳಿಂದಲೂ, ನಿಸರ್ಗ ಸಂಪತ್ತಿನಿಂದಲೂ, ಮಹತ್ವ ಪೂರಿತವಾಗಿಯೂ, ಅತ್ಯಂತ ಶ್ರೇಷ್ಠವಾದ ಪುಣ್ಯಸ್ಥಳವೆಂದು ಹೆಸರು ಪಡೆದು ದಾಗಿಯೂ ಇರುವ ಚುಂಚನಗಿರಿಯನ್ನು ಒಮ್ಮೆಯಲ್ಲ ಹತ್ತುಬಾರಿ ಸಂದರ್ಶಿಸಿ ಬಂದರೂ ತೃಪ್ತಿಯಾಗದು !

# ನಮ್ಮ ಮಗುವಿಗೊಂದು ಹೆಸರು

ಹುಟ್ಟಿದವರಿಗೆ ಒಂದು ಹೆಸರು, ಕಟ್ಟಿದ ಊರಿಗೆ ಒಂದು ಹೆಸರು, ಸಾಕು ಪ್ರಾಣಿಗಳಿಗೂ ಹೆಸರು. ಹುಟ್ಟುಹೆಸರು ಬೇರೆ; ಅಡ್ಡಹೆಸರು ಬೇರೆ. ಹುಟ್ಟು ಹೆಸರನ್ನು ಯಾವುದೋ ಸಂಪ್ರದಾಯಕ್ಕೆ ಕಟ್ಟುಬಿದ್ದು ಇಟ್ಟರೆ, ಅಡ್ಡಹೆಸರು ವ್ಯಕ್ತಿಯ ಆಕಾರ, ಬಣ್ಣ, ಗುಣಶೀಲಗಳಿಗೆ ಸಂಬಂಧಿಸಿದಂತೆ ಸಹಜವಾಗಿರುತ್ತದೆ. ಅಡ್ಡಹೆಸರು ಗಳಿಸಿದ್ದು. ಅದು ಐಶ್ವರ್ಯದಂತೆ, ಹಕ್ಕಿನಂತೆ, ಅಧಿಕಾರದಂತೆ. ಹುಟ್ಟು ಹೆಸರಿನಲ್ಲೇನಿದೆ! ನಕ್ಷತ್ರವನ್ನು ನೋಡಿ ಜೋಯಿಸರು ಇಟ್ಟದ್ದು ಅದು! ಆ ವಂಶದ ಹಿರಿಯರ ಹೆಸರನ್ನು ಅವರ ನೆನಪಿಗಾಗಿ ಮನೆಯವರಿಟ್ಟದ್ದು. ಮನೆದೇವರು ಎಂದು ಮಕ್ಕಳಿಗೆ ಆ ದೇವರ ಹೆಸರನ್ನೇ ಕರೆದಿದ್ದು. ವ್ಯಕ್ತಿಯ ಸ್ವಭಾವ, ಗುಣಗಳಿಗೆ ಹೊಂದದ ಹೆಸರು ವ್ಯರ್ಥವೆಂದೇ ನನ್ನ ಭಾವನೆ. ಆದರೂ ಊರಿಗೆ ಒಳ್ಳೆಯ ಹೆಸರಿರಬೇಕು, ಮಂದಿಗೆ ಒಳ್ಳೆಯ ಹೆಸರಿರಬೇಕು, ಸಾಕು ಪ್ರಾಣಿಗಳಿಗೂ ಹೆಸರುಬೇಕು. ಹೆಸರು ಜೀವನದ ಉಸಿರು; ಅದೇ ಜೀವನದ ಆಧಾರಸ್ತಂಭ. 'ಹೆಸರು ಬಲ' ಎಂದು ಹಿರಿಯರು ಕರೆದಿರುವುದರಲ್ಲಿ ತಪ್ಪೇನೂ ಇಲ್ಲ. ಹೆಸರುಬಲ ನೋಡಿ ವಿವಾಹ ಕಾರ್ಯಗಳನ್ನು ನಿರ್ಧರಿಸುವ ಪರಿಪಾಠ ನಮ್ಮ ಕಡೆ ಇಂದಿಗೂ ಇದೆ. ಹುಟ್ಟಿದ ನಕ್ಷತ್ರ, ದಿನ, ವರ್ಷಗಳು ತಿಳಿಯದಿದ್ದರೂ ವ್ಯಕ್ತಿಯ ಹೆಸರಿನ ಮೊದಲ ಅಕ್ಷರದ ಜಾಡನ್ನೇ ಹಿಡಿದು ನಮ್ಮ ಜೋಯಿಸರು ಪ್ರತಿವರ್ಷವೂ ಯುಗಾದಿಯ ಫಲಗಳನ್ನು ಹೇಳುವುದಿಲ್ಲವೇ? ಆದ್ದರಿಂದ ಹೆಸರು ಒಬ್ಬ ವ್ಯಕ್ತಿಯನ್ನು ಗುರುತಿಸಲು ಮಾತ್ರ ಇಟ್ಟಂಥ ನಿರರ್ಥಕ ನುಡಿಗಟ್ಟಲ್ಲ; ಬದುಕಿನೊಡನೆ ಸಜೀವ ಸಂಬಂಧವನ್ನು ಇಟ್ಟುಕೊಂಡ ಸಾರ್ಥಕ ನಾಮ. ಬದುಕನ್ನು ನಡೆಸುವುದು, ಕೆಡಿಸುವುದು, ರೂಪಿಸುವುದು ಅದರ ಕೈಯಲ್ಲೂ ಸಾಧ್ಯ ಎಂಬುದನ್ನು ಮರೆಯಲಾದೀತೆ!

ನಮ್ಮ ಮಗು ಹುಟ್ಟಿದಾಗ ಎಲ್ಲರೂ ಸಂತೋಷ ಸಂಭ್ರಮದಲ್ಲಿ ಮಳುಗಿದ್ದಾಗ ನಾನು ಮಾತ್ರ ದೊಡ್ಡ ಗೊಂದಲದಲ್ಲಿ ತೊಳಲಾಡುತ್ತಿದ್ದೆ. ನಮ್ಮ

ಮಗುವಿಗೆ ಒಳ್ಳೆಯ ಹೆಸರನ್ನು ಕಟ್ಟಬೇಕು; ಯಾರು ಇಡದಂಥ ಹೆಸರನ್ನು ಇಡಬೇಕು, ಆ ಹೆಸರಿನಲ್ಲಿ ಧ್ವನಿಶಕ್ತಿಯಿರಬೇಕು, ಅರ್ಥವ್ಯಾಪ್ತಿ ಇರಬೇಕು, ನಮ್ಮ ಸಂಸ್ಕೃತಿಯ ಶ್ರೀಗಂಧದ ಲೇಪನವಿರಬೇಕು ಜೋಯಿಸರು ನಕ್ಷತ್ರದ ಜಾಡು ಹಿಡಿದು ಹೇಳಿದ ಅಕ್ಷರಗಳೂ ಉಳಿಯಬೇಕು. ಈವರೆಗೆ ಯಾರೂ ಇಡದ, ಯಾರೂ ಕೇಳಿರದ, ಹೆಸರನ್ನು ಹೇಳಿದೊಡನೆಯೇ, ಬೆರಗಾಗುವ, ಬೆಪ್ಪಾಗುವ ಹೆಸರು ಬೇಕು. ಗಂಟೂ ಉಳಿಯಬೇಕು, ನೆಂಟೂ ಉಳಿಯ ಬೇಕು. ಜೋಯಿಸರು ಕೊಟ್ಟ ಅಕ್ಷರಗಳನ್ನು ಬಿಡದೆ, ನಮಗೆ ಪ್ರಿಯವಾದ ಹೆಸರನ್ನು ಹುಡುಕುವ ದೊಡ್ಡ ಸಂಶೋಧನೆಗೆ ನಾನು ಹೊರಟೆ.

ನಮ್ಮ ಪುರಾಣ ಪ್ರಪಂಚ ಹೆಸರಿನ ದೊಡ್ಡ ಕಣಜ. ಭಾರತೀಯ ಹಾಗೂ ಕರ್ನಾಟಕದ ಇತಿಹಾಸದ ಪುಟಗಳಲ್ಲಿ ಮನೋಜ್ಞ ಹೆಸರುಗಳ ದೊಡ್ಡ ಪಟ್ಟಿಯೇ ಸಿಕ್ಕುತ್ತದೆ. ಸಾಹಿತ್ಯ ಲೋಕಕ್ಕೆ ಸಂಬಂಧಿಸಿದ ನನ್ನಂಥ ವನು ಹಳೆಯ ಕಾವ್ಯಗಳನ್ನು, ಕವಿಚರಿತ್ರೆಯ ಮೂಲೆ ಮೂಲೆಯನ್ನು, ಶಾಸನಗಳ ಸಾಗರವನ್ನು ಜಾಲಾಡಿದ್ದರೂ ಅಚ್ಚರಿಯೇನಿಲ್ಲ. ಕನ್ನಡ ಕಾವ್ಯ ಗಳಲ್ಲೆಲ್ಲ, ಜೈನ, ವೀರಶೈವ, ಬ್ರಾಹ್ಮಣ ಕವಿಗಳು ಕೊಟ್ಟ ಹೆಸರು ಯಾವುವೂ ಸಮರ್ಪಕವಾಗಿ ತೋರಲಿಲ್ಲ. ಐತಿಹಾಸಿಕ ವೀರರನ್ನು ಅರಸುತ್ತ ಪಲ್ಲವ, ಚೋಳ, ಕದಂಬ, ಗಂಗ, ಚಾಲುಕ್ಯ, ಹೊಯ್ಸಳ ಮನೆತನ ಗಳನ್ನೆಲ್ಲ ಸಂದರ್ಶಿಸಿ ಹೆಸರಿನ ಜೋಳಿಗೆ ಹಿಡಿದು ತಿರುಗಿದೆ. ನಮ್ಮ ಪೂರ್ವಿಕರು ಎಂಥ ಮೇಧಾವಿಗಳು, ಎಂಥ ಸೌಂದರ್ಯಪ್ರಿಯರು! ಅಪೂರ್ವ ವಾದ ಆಕರ್ಷಕವಾದ ಹೆಸರುಗಳ ಅನಂತ ಸಾಗರವೇ ನನ್ನ ಎದುರಾಗಿ ದಿಗ್ಭ್ರಮೆ ಹಿಡಿಸಿತು. ಕ್ಷಣಕಾಲ ಮೂಕನಾಗಿ ನಿಂತು ಯಾವ ರತ್ನವನ್ನು ಆರಿಸಿಕೊಳ್ಳಲಿ ಎಂದು ತಡಕುವಾಗ ಜೋಯಿಸರು ನೀಡಿದ 'ಗು' ನೆನಪಿಗೆ ಬಂತು. ಆ ವರ್ಣದಿಂದಲೇ ಆರಂಭವಾಗುವ ಹೆಸರನ್ನು ಇಡಬೇಕೇ ! ಇದೆಂಥ ನಿರ್ಬಂಧ ! ನಮಗೆ ಪ್ರಿಯವಾದ ಯಾವುದೋ ಹೆಸರನ್ನು ಪ್ರಾಚೀನ ಗ್ರಂಥರಾಶಿಯಿಂದ ಆರಿಸಿ ಇಟ್ಟರೆ ಏನಾಗುತ್ತದೆ? ಒಳ್ಳೆಯ ಫಲಗಳು ದೊರೆಯವೇ ! ಆ ಗೊಡ್ಡು ನಂಬಿಕೆಗಳನ್ನು ನಾಗರಿಕರಾದ ನಾವೂ ಪಾಲಿಸಬೇಕೆ ? ಬೇಡ ! ನನ್ನ ಮಗುವಿಗೆ ಹೆಸರಿಡಲು ನನಗೆ ಹಕ್ಕಿದೆ !

ಹಿರಿಯರನ್ನು ಕೇಳಬೇಕೇಕೆ ? ಜೋಯಿಸರ ಮಾತಿಗೆ ಮನ್ನಣೆ ನೀಡಬೇಕೇಕೆ ? ನನಗೆ ಇಷ್ಟವಾದ ಹೆಸರನ್ನು ಇಡಬೇಕು !

ಮನಸ್ಸು ಸಂಪ್ರದಾಯದ ಕಪಿಮುಷ್ಟಿಯಿಂದ ಜಾರಿಕೊಳ್ಳಲು ಹವಣಿಸುತ್ತದೆ. ಕ್ರಾಂತಿಕಾರಕವಾದ ಹೆಸರೊಂದನ್ನಿಟ್ಟು ರಮ್ಯವಾದ ಹೆಸರೊಂದನ್ನು ಕರೆದು ಸೈ ಎನ್ನಿಸಿಕೊಳ್ಳಬೇಕೆನಿಸುತ್ತದೆ. ಆದರೆ....ಆದರೆ....ಹಿರಿಯರು ನಡೆಸಿಕೊಂಡು ಬಂದ ಪದ್ಧತಿ, ಸಂಪ್ರದಾಯವನ್ನು ಮುರಿದರೆ ಹೇಗೆ? ಎಷ್ಟೋ ವರ್ಷದಿಂದ ಉಳಿಸಿಕೊಂಡು ಬಂದ ಶಿಷ್ಟ ಆಚಾರಗಳನ್ನು ಕೈಬಿಟ್ಟು ಬಿಡುವುದೇ ! ನಮ್ಮ ಮಗು ! ಆರೋಗ್ಯವಾಗಿ, ದೃಢಕಾಯವಾಗಿ, ಒಳ್ಳೆಯ ಯಶಸ್ಸನ್ನು ಗಳಿಸಿ ಬಾಳಿನುದ್ದಕ್ಕೂ ಬೆಳಗಬೇಕು ಎಂಬ ಆಸೆ ಯಾವ ತಂದೆ–ತಾಯಿಗಿರದು ! ಜೋಯಿಸರು ಕೊಟ್ಟ 'ಗು' ವನ್ನು ಬಿಟ್ಟರೆ ಹೇಗೋ! ಏನೊ! ಇರಲಿ ಅದನ್ನೂ ಉಳಿಸಿಕೊಂಡರೇ !

ಮೊದಲನೆಯ ಮಗು, ಮನೆದೇವರಾದ ಚುಂಚನಗಿರಿ ಭೈರವನ ಹೆಸರನ್ನೇ ಇಡಬೇಕು ಎಂದು ತಾಯಿಯವರು ಹಟಹಿಡಿದರು. ಸಂಸ್ಕೃತದ ಕ್ಲಿಷ್ಟವಾದ ಹೆಸರುಗಳನ್ನು ಅವರ ಮುಂದೆ ಪಠಿಸಿದಾಗ "ಇದೇನು ಹೆಸರುಗಳು ನಮಗೆ ಹೇಳುವುದಕ್ಕೇ ಬರದಂತಿವೆ" ಎಂದು ತಿರಸ್ಕರಿಸಿಬಿಟ್ಟರು ! ಈಗ ಕಾಲ ಬದಲಾಗಿ ನವೀನ ರೀತಿಯ ಉಡುಗೆ ತೊಡುಗೆ ಬಂದಂತೆ ಹೆಸರುಗಳನ್ನು ಇಡುವುದರಲ್ಲೂ ನವೀನತೆ ಕಂಡುಬರುತ್ತಿದೆ. ಸಿನಿಮಾ ಪ್ರಪಂಚದ ಹೆಸರುಗಳು ಈಗ ಹಳ್ಳಿ ಹಳ್ಳಿಯನ್ನೂ ಪ್ರವೇಶಿಸಿವೆ. ಕೆಲವು ವಿದ್ಯಾವಂತರು ಪ್ರಾಚೀನ ಪುರಾಣೇತಿಹಾಸಗಳ ಪ್ರಸಿದ್ಧ ಪುರುಷರ ಹೆಸರನ್ನು ತಮ್ಮ ಮಕ್ಕಳಿಗೆ ಇಟ್ಟು, ಅಷ್ಟರಲ್ಲೇ ನಮ್ಮ ಸಂಸ್ಕೃತಿಯನ್ನು ಸೀಮಿತಗೊಳಿಸಿಕೊಂಡಿದ್ದಾರೆ. ಏಕೆಂದರೆ ಹೆಸರನ್ನುಳಿದ ಉಳಿದ ಬೆಳವಣಿಗೆಯೆಲ್ಲ 'ಡ್ಯಾಡಿ' 'ಮಮ್ಮಿ'ಗಳ ಪ್ರಪಂಚಕ್ಕೆ ಸೇರಿದುದು ! ಸದ್ಯ ಇನ್ನೂ ಮಕ್ಕಳ ಹೆಸರುಗಳನ್ನು ಅವರು 'ಜಾಕ್', 'ಜಿಲ್' ಎಂದು ಕರೆಯುವ ಸಾಹಸ ಮಾಡಿಲ್ಲ ಕೌವ್‌ಬಾಯಿ ಪ್ಯಾಂಟುಗಳ ಈ ದಿನಗಳಲ್ಲಿ ಮುಂದೆ ಮಕ್ಕಳ ಹೆಸರು ಏನಾಗುತ್ತದೊ ! ಎಂತಾಗುತ್ತದೊ ! ದೇವರೇ ಕಾಪಾಡಬೇಕು ! ಹೆಸರಿಡುವುದರಲ್ಲಿ ನಾವು ನಮ್ಮ ಕನ್ನಡತನವನ್ನು ಮರೆಯುತ್ತಿದ್ದೇವೆ. ಆಂಡಯ್ಯನ ಛಲ ನಮ್ಮಲ್ಲಿ ಮರೆಯಾಗುತ್ತಿದೆ. ಅಚ್ಚಗನ್ನಡ

ಹೆಸರುಗಳೆಲ್ಲಾ ನಮ್ಮ ಕನ್ನಡ ಪ್ರೇಮ ಬೆಳೆದಂತೆಲ್ಲ ಮರೆಯಾಗಿ ಹೋಗುತ್ತಿದೆ! ಮನೆತನದ ಘನತೆ ಗೌರವಗಳನ್ನು ಮತಪಂಥಗಳ ವಿಶಾಲದೃಷ್ಟಿ, ಸೃಷ್ಟಿಗಳನ್ನು ಈಗಿನ ಹೆಸರುಗಳು ಮರೆಸಿ ಬಿಡುತ್ತಿವೆ. ಕೃಷ್ಣೇಗೌಡರು ಕೃಷ್ಣನ್ ಆಗಿದ್ದಾರೆ, ಕೃಷ್ಣಮೂರ್ತಿರಾಯರು ಕೃಷ್ಣಮೂರ್ತಿಯಾಗಿದ್ದಾರೆ, ನರಸಿಂಹಾಚಾರ್ಯರು ನರಸಿಂಹನ್ ಆಗಿದ್ದಾರೆ, ಶಿವಶಂಕರಾರಾಧ್ಯರು ಶಿವಶಂಕರ್ ಆಗಿದ್ದಾರೆ. ಹೆಸರುಗಳು ಹೀಗೆ ಸಂಕ್ಷೇಪಗೊಳ್ಳುತ್ತಿವೆ. ತಮ್ಮ ಮೊದಲಿನ ವಿಜೃಂಭಣೆಯನ್ನು, ವೈಭವವನ್ನು ಕಳೆದುಕೊಳ್ಳುತ್ತಿವೆ. ಬಾಯ್ತುಂಬ ಸುದೀರ್ಘವಾದ ಹೆಸರುಗಳನ್ನು ಉಚ್ಚರಿಸಿ, 'ಚಂದ್ರಶೇಖರ ಪಂಡಿತಾರಾಧ್ಯ'ರನ್ನು 'ಚಂದ್ರು' ಎಂದಷ್ಟೇ ಕರೆದರೆ, 'ರವಿಶಂಕರ ಶುಕ್ಲ'ರನ್ನು 'ರವಿ' ಎಂದಷ್ಟೇ ಕರೆದರೆ ಯಾರಿಗೆ ಹಿತವೆನಿಸುತ್ತದೆ!

ಜಾನಪದ ಸಂಗ್ರಾಹಕರು ಹಳ್ಳಿ ಹಳ್ಳಿಯನ್ನು ಅಲೆಯುತ್ತಿರುವ ಈ ದಿನಗಳಲ್ಲಿ ಹಳ್ಳಿಗರ ಹೆಸರುಗಳನ್ನೂ, ಅಡ್ಡಹೆಸರುಗಳನ್ನೂ ಅಗತ್ಯವಾಗಿ ಸಂಗ್ರಹಿಸಬೇಕು. ಏಕೆಂದರೆ ಇನ್ನೊಂದು ದಶಕದಲ್ಲಿ ನಮ್ಮ ಪರಂಪರೆಯಲ್ಲಿ ಬಂದ ಹೆಸರುಗಳನ್ನು ನಾವು ಜಾನಪದ ಸಂಗ್ರಹಗಳಲ್ಲಿ ಮಾತ್ರ ನೋಡಬೇಕಾಗುತ್ತದೆ! 'ಕೆಂಪವ್ವ', 'ಹೊನ್ನವ್ವ', 'ಚೆನ್ನವ್ವ', 'ಮಲ್ಲಿಗವ್ವ', 'ಹೂವಮ್ಮ', 'ಚೆಲುವಮ್ಮ' ಈ ಹೆಸರುಗಳನ್ನು ಈಗ ಯಾರು ಇಡುತ್ತಿದ್ದಾರೆ? ಇಂಥ ಮೋಹಕವಾದ ಸ್ತ್ರೀಸಹಜ ಸೌಂದರ್ಯ ಲಾಲಿತ್ಯಗಳನ್ನು ಧ್ವನಿಸುವ ಮುದ್ದಾದ ಹೆಸರುಗಳು ಯಾರಿಗೆ ಬೇಕು? ನಾನು ಊರಿಗೆ ಹೋದಾಗ ಹೊಸದಾಗಿ ಮಕ್ಕಳಾದವರು ನನ್ನ ಬಳಿಗೆ ಬರುತ್ತಾರೆ. ಅವರಿಗೆ ಒಳ್ಳೆಯ ಹೆಸರನ್ನು ಇಡುವುದರಲ್ಲಿ ನನ್ನ ಕೌಶಲವನ್ನು ತೋರಬೇಕು. ನಮ್ಮ ಊರಿನ ಮಕ್ಕಳಿಗೆ ಹೇಮಾಕ್ಷಿ ಎಂಬ ಹೆಸರನ್ನು ಇಟ್ಟೆ, ವನಮಾಲಾ ಎಂಬ ಹೆಸರನ್ನು ಕರೆದೆ, ಸತ್ಯಪ್ರಕಾಶ ಎಂಬ ನಾಮಧೇಯವನ್ನು ಮೆರೆಸಿದೆ. ಈ ಸಂಸ್ಕೃತ ಮೋಹವನ್ನು ಕಡಿಮೆ ಮಾಡಿ ಅಚ್ಚಗನ್ನಡ ಹೆಸರುಗಳ ಪುನರುತ್ಥಾನವನ್ನು ಕೈಗೊಳ್ಳಬೇಕು ಎಂದು ಈಗ ನನಗನ್ನಿಸುತ್ತಿದೆ.

ಹೆಸರುಗಳಿಗೆ ಈಗ ನಾವು ನೀಡುತ್ತಿರುವ ಮಹತ್ವವನ್ನು ಹಿಂದಿನವರು ನೀಡುತ್ತಿರಲಿಲ್ಲವೆನಿಸುತ್ತದೆ. ಹುಟ್ಟಿದ ಮಗುವಿಗೊಂದು ಹೆಸರನ್ನಿಡಬೇಕು.

ಕಾಟ, ಕಾಡ, ಕಲ್ಲ, ಗಿಡ್ಡ, ಕೆಂಪ, ಕರಿಯ ಎಂದು ಕರೆದುಬಿಡುತ್ತಿದ್ದರು. ಅನೇಕ ಸಂದರ್ಭಗಳಲ್ಲಿ ಇಟ್ಟ ಹೆಸರು ಮರೆಯಾಗಿ ಮಕ್ಕಳನ್ನು ಮುದ್ದಿಗಾಗಿ ಕರೆಯುತ್ತಿದ್ದ 'ಮರಿ', 'ಪುಟ್ಟ', 'ತಮ್ಮಯ್ಯ', 'ತಾಯಿ' ಮುಂತಾದ ಮಾತು ಗಳೇ ಹೆಸರಾಗಿ ನಿಂತುಬಿಡುತ್ತವೆ. ಎಲ್ಲ ಮಕ್ಕಳಿಗೂ ಆ ಮಾತುಗಳು ನಿಂತು ವಿಚಿತ್ರರೀತಿಯ ಬೆಳವಣಿಗೆಗಳನ್ನು ಪಡೆದುಕೊಳ್ಳಬಹುದು. ಇಬ್ಬರು 'ಮರಿ' ಗಳು ಒಂದು ಮನೆಯಲ್ಲಿದ್ದರೆ ಒಬ್ಬ ಸಣ್ಣಮರಿ ಇನ್ನೊಬ್ಬ ದೊಡ್ಡಮರಿ ಆಗು ತ್ತಾನೆ; ಸಣ್ಣಪುಟ್ಟ, ದೊಡ್ಡಪುಟ್ಟ ಮರಿಪುಟ್ಟ ಹೆಸರುಗಳು ಬಂದದ್ದೂ ಹೀಗೆಯೇ. ಸಣ್ಣ–ಪುಟ್ಟ ಈ ಮಾತುಗಳ ಅರ್ಥದ ಕಡೆ ಹೆಸರಿಡುವವರಿಗೆ ಗಮನವಿರುವುದೇ ಇಲ್ಲ. ಆ ವ್ಯಕ್ತಿಯನ್ನು ಗುರುತಿಸುವ ಉದ್ದೇಶ ಮಾತ್ರ ಆ ಹೆಸರಿಗಿರುವುದರಿಂದ ಏನೋ ಕರೆಯಬೇಕು; ಕರೆದುಬಿಡುತ್ತಾರೆ. ರೂಢಿಗತವಾಗಿ ಆ ಒಂದೇ ಅರ್ಥದ ಎರಡು ಮೂರು ಮಾತುಗಳು ಹೆಸರುಗಳಲ್ಲಿ ನಿಂತುಹೋಗುತ್ತವೆ.

ತಮ್ಮಯ್ಯಪ್ಪ, ಅಣ್ಣಪ್ಪಯ್ಯ, ಅಯ್ಯಪ್ಪಣ್ಣ, ಸಣ್ಣಪ್ಪಯ್ಯ ಮುಂತಾದ ಕೆಲವು ಹೆಸರುಗಳನ್ನು ಬಿಡಿಸಿನೋಡಿದರೆ 'ತಮ್ಮ', 'ಅಯ್ಯ', 'ಅಪ್ಪ', 'ಅಣ್ಣ' ಎಲ್ಲ ಮಾತುಗಳೂ ಒಂದೇ ಹೆಸರಿನಲ್ಲಿ ಸೇರಿಕೊಂಡಿರುವುದನ್ನು ಗಮನಿಸಿದ ಒಂದು ಕ್ಷಣ ವಿಚಿತ್ರವೆನಿಸುತ್ತದೆ. ಹೆಸರನ್ನಿಡುವ ಉದ್ದೇಶಕ್ಕೆ ಇಲ್ಲಿ ಯಾವ ಶಾಸ್ತ್ರೀಯ ವಿಶ್ಲೇಷಣೆಯನ್ನು ಹೇಳಲು ಸಾಧ್ಯ? ಹೆಸರೊಂದು ಬೇಕು, ಇಟ್ಟಿದ್ದಾರೆ. ಅಣ್ಣ, ಅಣ್ಣಯ್ಯನಾಗಿ, ಅಣ್ಣಯ್ಯಪ್ಪನಾಗಿ ಬೆಳೆದುಕೊಳ್ಳುತ್ತದೆ. ಈ ಯಾವುದರ ಲಕ್ಷ್ಯವೂ ಇಲ್ಲದೆ ಆ ಮಾತುಗಳು ನಿಂತು ಹೋಗುತ್ತವೆ.

ವ್ಯಕ್ತಿಗಳಿಗೆ ಅಡ್ಡಹೆಸರು ಹುಟ್ಟಿಕೊಳ್ಳುವುದು ಸ್ವಲ್ಪ ಪ್ರೌಢಾವಸ್ಥೆ ಯನ್ನು ಆ ವ್ಯಕ್ತಿ ತಲುಪಿದಾಗ. ಬಣ್ಣಕ್ಕೆ ಸಂಬಂಧಿಸಿದಂತೆ, ಶರೀರದ ಅಂಗಾಂಗಗಳ ವೈಚಿತ್ರ್ಯಗಳಿಗೆ ಸಂಬಂಧಿಸಿದಂತೆ, ಅಡ್ಡಹೆಸರು ಹುಟ್ಟಿಕೊಳ್ಳ ಬೇಕಾದರೆ ಅಷ್ಟು ಕಾಲ ಕಾಯಬೇಕಾದುದಿಲ್ಲ. ಬಾಲ್ಯದಿಂದಲೇ ಆ ಹೆಸರು ಜನಪ್ರಿಯತೆಯನ್ನು ಗಳಿಸಿಕೊಳ್ಳುತ್ತ ಮೂಲ ಹೆಸರನ್ನು ಮರೆಸಿಬಿಡಬಹುದು; ಇಲ್ಲವೇ ಅದರೊಡನೆಯೇ ಸೇರಿಕೊಂಡು ಬರಬಹುದು. ನಮ್ಮೂರ ಕುಂಟಗಿರಿ ಯಣ್ಣ, ಗೆಂಡೆಲಿಂಗಣ್ಣ, ಈ ಹೆಸರುಗಳಲ್ಲಿ 'ಕುಂಟ', 'ಗೆಂಡೆ' ಅನಂತರ ಸೇರಿ ಕೊಂಡ ವಿಶೇಷಣಗಳು. ಲಿಂಗಣ್ಣನ ಗಡ್ಡೆ, ಗಿರಿಯಣ್ಣನ ಕುಂಟು ಇದಕ್ಕೆ

ಕಾರಣವಾದರೂ ಆ ಹೆಸರುಗಳನ್ನು ಇತರರು ಹೇಳಿದಾಗ ಸಂಬಂಧಪಟ್ಟವರು ಆಕ್ಷೇಪಿಸದಷ್ಟು ತನ್ನ ಪ್ರಬಲತೆಯನ್ನು ಆ ಮಾತುಗಳು ಕಳೆದುಕೊಳ್ಳುತ್ತವೆ. ಇದು ಎದ್ದು ತೋರುವ, ಮೂಲದ ಹೆಸರನ್ನು ಮರೆಸಿ ಬಿಡುವ ಪರಿಯಲ್ಲ. ಹೇಗೂ ತಂದೆ ತಾಯಿಗಳು ಇಟ್ಟ ಹೆಸರು ಉಳಿದುಕೊಂಡೇ ಬರುತ್ತದೆ.

ಹರುಕು ತುಟಿಯ, ಗೆಡ್ಡೆಮೂಗ, ಮೆಳ್ಳೆಗಣ್ಣ, ಆನೆಕಿವಿಯ, ತೊಸಿಯ, ಮಂಟ, ಕಿವುಡ, ಗಿಡ್ಡ, ಬೀಸುಗಾಲ, ಹೆಳವ, ಕರಿಯ, ಕೆಂಚ, ಈ ಹೆಸರುಗಳನ್ನು ಗಮನಿಸಿದಾಗ ಹಳ್ಳಿಯ ಪ್ರತಿಯೊಬ್ಬನಿಗೂ ಒಂದಲ್ಲ ಒಂದು ಪ್ರಶಸ್ತಿ ಲಭ್ಯವಾಗದಿರುವುದೇ ವಿರಳ. ಅಡ್ಡ ಹೆಸರನ್ನು ಹಿಡಿದು ಕರೆಯುವುದರಲ್ಲಿ ಇರುವ ಸ್ವಾರಸ್ಯ ನಿಜನಾಮದಲ್ಲಿ ಇರುವುದಿಲ್ಲ. ಅಡ್ಡಹೆಸರನ್ನು ಹೇಳದೆ ಕೆಲವು ವ್ಯಕ್ತಿಗಳನ್ನು ಗುರುತಿಸುವುದೇ ಕಷ್ಟವಾಗುತ್ತದೆ. ರಾಮಯ್ಯ ಉರುಫ್ ಗೆಡ್ಡೆಮೂಗ ಎಂದೇ ಅವನ ಹೆಸರನ್ನು ರೆವಿನ್ಯೂ ದಾಖಲೆಗೆ ತೆಗೆದುಕೊಳ್ಳುತ್ತಾರೆ. ಅವನು ರುಜು ಹಾಕುವುದನ್ನು ಕಲಿತರೂ ರಾಮಯ್ಯ ಉರುಫ್ ಗೆಡ್ಡೆಮೂಗ ಎಂದೇ ಹಾಕಬೇಕು. ಅವನ ಸಮಸ್ತ ವ್ಯವಹಾರಗಳೂ ಈ ಎರಡು ಹೆಸರುಗಳಲ್ಲಿ ನಡೆಯುತ್ತವೆ. ಕೊನೆಗೆಂದೋ ಒಂದು ದಿನ ಹುಟ್ಟುಹೆಸರು ಬಿದ್ದು ಹೋಗಿ, ಜಾಜ್ವಲ್ಯಮಾನವಾಗಿ ಪ್ರಕಾಶಿಸುತ್ತ ಅಡ್ಡಹೆಸರು ನಿಂತುಬಿಡುತ್ತದೆ.

ಸಂಸ್ಕೃತ ಹೆಸರುಗಳು ಹಳ್ಳಿಗರ ನಾಲಗೆಯಲ್ಲಿ ಹೊರಳಿ ಹೊರಳಿ ಬೆಣ್ಣೆಯಾಗುತ್ತವೆ. ನದಿಯ ಮೈಯಲ್ಲಿ ಕಾಡುಕಲ್ಲು ಎಷ್ಟೋ ವರ್ಷಗಳ ಹೊರಳುವಿಕೆಯಲ್ಲಿ ಹಣ್ಣಾಗಿ ಅಣ್ಣೆಯ ಕಲ್ಲಾಗುವಂತೆ. ನಮ್ಮ ಪ್ರಕಾಶನನ್ನು ನಮ್ಮೂರಿನವರು 'ಪರಕಾಸು' ಎಂದೇ ಕೂಗುತ್ತಾರೆ. ತಿಮ್ಮಪ್ಪ ಗೌಡರ ಮಗಳು ಸಾವಿತ್ರಿ ಸಾವಂತ್ರಿಯಾಗಿದ್ದಾಳೆ; ಲಸ್ಮಣ, ಇಸಕಂಟ, ಕಿಷ್ಣಪ್ಪ ಇವರೆಲ್ಲ ತಮ್ಮ ಹೆಸರನ್ನು ಸರಿಯಾಗಿ ಉಚ್ಚರಿಸಿದರೆ ಅಣಕಿಸುತ್ತಿದ್ದಾರೆ ಎಂಬ ಭ್ರಮೆಗೆ ಒಳಗಾಗುವಂತೆ ಈ ಮಾತುಗಳು ಒಗ್ಗಿಹೋಗಿವೆ.

ಹೆಸರಿಗಾಗಿ ಅಷ್ಟೊಂದು ಮಹತ್ವವನ್ನು ಕೊಡಬೇಕಿಲ್ಲ; ಒಳ್ಳೆಯ ಕನ್ನಡ ಮಾತೊಂದಿದ್ದರೆ ಸಾಕು ಎಂಬುದನ್ನು ಕಾಣಬೇಕಾದರೆ, ಕನ್ನಡದ ಕೆಚ್ಚನ್ನು ಸರಿಯಾಗಿ ಗುರ್ತಿಸಬೇಕಾದರೆ ಉತ್ತರ ಕರ್ನಾಟಕದ ಹೆಸರು

ಗಳತ್ತ ಹೊರಳಬೇಕು. ದೇವರು ದಿಂಡರನ್ನು ಲೆಕ್ಕಿಸದೆ ನಿಸರ್ಗದ ಕಣಜದಿಂದ ಯಾವುದೋ ಹೆಸರನ್ನು ಆಯ್ದುಕೊಳ್ಳುವ ಸೊಗಸಿಗೆ ನಾವು ಆ ಕಡೆಯೇ ನೋಡಬೇಕು. ಯಾರೂ ಕಾಣದ, ಕೇಳದ, ಅದೃಶ್ಯ ಲೋಕದ ಹೆಸರುಗಳಿಗಿಂತ, ಬಿಡಿಸಲು ತೊಡಕಾದ, ಅರ್ಥೈಸಲು ಕ್ಲಿಷ್ಟವಾದ, ಉಚ್ಚರಿಸಲು ಕಷ್ಟವಾದ ಹೆಸರುಗಳಿಗಿಂತಲೂ ಸುಲಭವಾದ ನಿತ್ಯಬಳಕೆಯ ಪದಾರ್ಥಗಳ ಹೆಸರನ್ನೇ ಇಟ್ಟುಕೊಳ್ಳುವುದು ಅನುಕರಣೀಯವಾಗಿದೆ. ಹೆಸರಿನ ಎಷ್ಟೋ ಸಮಸ್ಯೆಯನ್ನು ಅದು ಬಿಡಿಸುತ್ತದೆ. ನಮ್ಮ ಅನುಭವಕ್ಕೆ ನಿಲುಕುವ ಜನಸಾಮಾನ್ಯರ ಉಚ್ಚಾರಣೆಯಲ್ಲಿ ಸೋಲದ ಇಂಥ ಹೆಸರುಗಳ ಬಗ್ಗೆ ಎಷ್ಟು ಹೇಳಿದರೂ ಕಡಮೆಯೇ. ಅಲ್ಲಿನ ಹೆಸರುಗಳಲ್ಲಿನ ಕನ್ನಡತನದ ಅರಿವು ಅಭಿಮಾನಪಡುವಂಥದು. ನೆಲದ ಪ್ರೇಮ, ನುಡಿಯ ಪ್ರೇಮ ಎರಡರ ಸಾಮರಸ್ಯ ಅಲ್ಲಿನ ಊರ ಹೆಸರನ್ನೂ ತಮ್ಮ ಹೆಸರಿನೊಡನೆ ಅಂಟಿಸಿಕೊಳ್ಳುವುದರಲ್ಲಿ ಸ್ಫುಟವಾಗಿ ಕಂಡುಬರುತ್ತವೆ. ಮಣ್ಣಿನ ಕಂಪು, ಸೊಗಡು ಆ ಹೆಸರುಗಳಲ್ಲಿ ತೋರುತ್ತದೆ.

ತಂದೆತಾಯಿಗಳು ಇಟ್ಟ ಅಚ್ಚುಕಟ್ಟಾದ ಹೆಸರುಗಳನ್ನು ಬದಲಿಸಿಕೊಳ್ಳುವ ವಿಚಿತ್ರ ಯುವಕರಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ವ್ಯವಹಾರ ಕುಶಲಿಗಳಾದ ಕೆಲವರು ಯಾವ ಜಾತಿಮತಗಳನ್ನೂ ಗುರುತಿಸಲು ಆಗದ ನಾಗರಿಕ ಹೆಸರುಗಳನ್ನು ಇಟ್ಟುಕೊಳ್ಳುತ್ತಿದ್ದಾರೆ. ಹೆಸರುಗಳ ಬಗ್ಗೆ ಈಗೀಗ ವಿಶೇಷ ಮಹತ್ವ ನೀಡುತ್ತಿರುವುದು ಕಂಡುಬರುತ್ತಿದ್ದರೂ ಅಚ್ಚಗನ್ನಡದ ಹೆಸರುಗಳ ಬಗ್ಗೆ ಉತ್ತಮ ನಿಷ್ಠೆ ತೋರಿಬರುತ್ತಿಲ್ಲ. ಷಣ್ಮುಗಂ ಇದ್ದರೆ ಆರುಮುಗಂ ಎಂದು ಬದಲಿಸಿಕೊಳ್ಳುವ ತಮಿಳು ಬಾಂಧವರ ಭಾಷಾನಿಷ್ಠೆ ನಮಗೇಕಿಲ್ಲ ?

ಎಲ್ಲಿ ಹುಡುಕಿದರೇನು, ಯಾವುದನ್ನು ಮೆಚ್ಚಿದರೇನು ನಮ್ಮ ಮಗುವಿಗೆ ಸರಿಯಾದ ಹೆಸರು ಇನ್ನೂ ಸಿಕ್ಕಿಲ್ಲ. ನಾನು ಒಳ್ಳೆಯ ಹೆಸರನ್ನು ಕೊಡುತ್ತೇನೆ, ಅಲ್ಲಿಯವರೆಗೆ ನಾಮಕರಣ ಬೇಡ ಎಂದು ನಮ್ಮ ಮಾವನವರಿಗೆ ಪತ್ರ ಬರೆದೆ. "ಮನೆಯಲ್ಲಿ ಮಗುವಿದೆ, ಏನಾದರೂ ಒಂದು ಹೆಸರಿನಲ್ಲಿ ಕರೆಯದಿದ್ದರೆ ಅದನ್ನು ಮಾತಾಡಿಸುವುದು ಹೇಗೆ, ಮುದ್ದಾಡುವುದು ಹೇಗೆ ? ನಗಿಸುವುದು ಹೇಗೆ ? ಯಾರಾದರೂ ಮಗುವಿನ ಹೆಸರನ್ನು ಕೇಳುತ್ತಾರೆ, ಏನನ್ನು ಹೇಳಬೇಕು ?

ನೀವು ಏನಾದರೇನು, ನಮ್ಮ ಮಗುವಿಗೆ ಒಂದು ಒಳ್ಳೆಯ ಹೆಸರನ್ನು ಕಟ್ಟಲಿಲ್ಲ" ಎನ್ನುವುದು ನಮ್ಮಾಕೆಯ ದೊಡ್ಡ ಆಕ್ಷೇಪ. ಒಂದು ತಿಂಗಳಾಯಿತು, ಎರಡು ತಿಂಗಳಾಯಿತು. ನಾನೂ ಅಮರಕೋಶದ ಹೆಸರುಗಳನ್ನೆಲ್ಲ ಅರಸಿ ನೋಡಿದೆ; ಪುರಾಣನಾಮಚೂಡಾಮಣಿಯ ಪುಟಗಳನ್ನೆಲ್ಲ ಶೋಧಿಸಿದೆ. ನಮ್ಮ ಮಗುವಿಗೆ ಸರಿಯಾದ ಹೆಸರು ಸಿಕ್ಕಲಿಲ್ಲ! ನನಗೆ ಸಮ್ಮತವಾದ ಹೆಸರು ಸಿಕ್ಕಲಿಲ್ಲ! ಊರ ಮಕ್ಕಳಿಗೆಲ್ಲ ಹೆಸರು ಇಡುವ ನನಗೇ ಈ ಅವಸ್ಥೆ ಬಂದದ್ದನ್ನು ನೆನಸಿಕೊಂಡರೆ ದುಃಖವಾಗುತ್ತದೆ. ನನ್ನ ಮಿತ್ರರನೇಕರು ನನ್ನ ಬಗ್ಗೆ ಕನಿಕರಪಟ್ಟು ತಾವು ಕೆಲವು ಹೆಸರುಗಳನ್ನು ದಾನ ಮಾಡಿ ನೋಡಿದರು. ಆದರೆ ನಾನು ಸ್ವೀಕರಿಸಲಿಲ್ಲ. ಬೇಸರವಾಗಿ ಹೇಳುವುದನ್ನು ಬಿಟ್ಟರು. ನಮ್ಮ ಮಾವನವರಿಗೆ ಮೊಮ್ಮಗನ ಮೇಲೆ ಇನ್ನಿಲ್ಲದ ಪ್ರೀತಿ. ನಾನೇನೋ ಪುಸ್ತಕ ಬರೆಯುತ್ತೇನೆ, ಕಾಲೇಜಿನ ವಿದ್ಯಾರ್ಥಿಗಳಿಗೆ ಪಾಠ ಹೇಳುತ್ತೇನೆ, ಊರೂರಿನಲ್ಲಿ ದೊಡ್ಡ ದೊಡ್ಡ ಸಭೆಗಳಲ್ಲಿ ಉಪನ್ಯಾಸ ಮಾಡುತ್ತೇನೆ, ಮಗುವಿಗೊಂದು ಒಳ್ಳೆಯ ಹೆಸರನ್ನಿಡಲಿಲ್ಲ ಎಂದರೆ ಅದಕ್ಕಿಂತ ಅಪಮಾನದ ಕೆಲಸ ಯಾವುದಿದೆ. ನಮ್ಮ ತಾಯಿ ಹೇಳಿದ್ದರು. "ಮನೆದೇವರ ಹೆಸರನ್ನು ಇಟ್ಟುಬಿಡಪ್ಪ" ಎಂದು. ಮೊಮ್ಮಗನನ್ನು ಮೊದಲ ಬಾರಿಗೆ ಅವರು ನೋಡಿದಾಗ ಆ ದೇವರ ಹೆಸರನ್ನೇ ಕರೆದು ಹೋದರು. ನಮ್ಮ ಬಂಧುಗಳು ಯಾವ ಯಾವ ಹೆಸರನ್ನೋ ಇಡಲು ಮುಂದೆ ಬಂದರು. ನನ್ನ ಮುದ್ದು ಮಗುವಿಗೆ ಅವರಿವರು ಕೊಟ್ಟ ಹೆಸರನ್ನು ಇಟ್ಟರೆ ನನ್ನ ಸ್ವಾಭಿಮಾನದ ಪ್ರಶ್ನೆ ಏಳುತ್ತದೆ.

ನಮ್ಮ ಮಾವನವರಿಗೆ ಸಿಟ್ಟು ಬಂತು. ಒಂದು ದಿನ ಮೊಮ್ಮಗನನ್ನು 'ಬಾಬು' ಎಂದು ಕರೆದರು. ಆ ಹೆಸರೇ ಈಗ ಉಳಿದುಹೋಗಿದೆ. ಮುಂದೆಯೂ ಉಳಿದುಹೋದರೆ! ನಮ್ಮ ನುಡಿಯ ಜಾಯಮಾನಕ್ಕೆ, ನಮ್ಮ ನೆಲದ ಕಂಪು ಸೊಂಪಿಗೆ, ನಮ್ಮ ಸಂಸ್ಕೃತಿಗೆ ಒಗ್ಗದ ಹೆಸರದು. ಏನಾದರೂ ಹೆಸರು ಬೇಕು ನಮ್ಮ ಮಗುವಿಗೆ! ಇದೆಂಥ ಪರಿಸ್ಥಿತಿ ನನಗೆದುರಾಯಿತು ಎಂದು ನಾನು ಪರಿತಪಿಸುತ್ತಿದ್ದೇನೆ. ಈಗ ದೇವರ ಆಸೆಯನ್ನು ಬಿಟ್ಟಿದ್ದೇನೆ. ಪುರೋಹಿತರ 'ಗು'ಕಾರವನ್ನೂ ಬಿಟ್ಟಿದ್ದೇನೆ. ಆಧುನಿಕ ಹೆಸರುಗಳ

ವ್ಯಾಮೋಹವನ್ನೂ ಬಿಟ್ಟಿದ್ದೇನೆ. ನನ್ನ ಸ್ವಾಭಿಮಾನವನ್ನೂ ದೂರ ಮಾಡಿದ್ದೇನೆ. ನಮ್ಮ ಮಗುವಿನ ಹೆಸರೊಂದರಲ್ಲಿ ಮಾತ್ರ ನನ್ನ ಕನ್ನಡಪ್ರೇಮವನ್ನು ಸ್ವಲ್ಪ ಉಪೇಕ್ಷಿಸಲೂ ಸಿದ್ಧನಿದ್ದೇನೆ. ಯಾರಾದರೂ ಒಂದು ಒಳ್ಳೆಯ ಹೆಸರನ್ನು ಹೇಳಿ ನನ್ನನ್ನು ಉದ್ಧರಿಸಬಾರದೆ !

ನಮ್ಮ ಮಗುವನ್ನು ನೀವು ನೋಡಿಲ್ಲ. ಅವನ ಹಾಲುಗೆನ್ನೆ, ಪ್ರೀತಿ ತುಳುಕುವ ಕಣ್ಣುಗಳು, ಎಂಥವರ ಹೃದಯವನ್ನೂ ಸೆಳೆಯುವ ಮುದ್ದು ಮಾತುಗಳು, ಶಿಶುಸಹಜವಾದ ಅವನ ತುಂಟಾಟಗಳು—ಇವೆಲ್ಲ ಆ ಹೆಸರಿನಲ್ಲಿ ಎರಕಗೊಂಡಿರುವಂತೆ, ಹಳೆಯದೂ ಅಲ್ಲದ, ಹೊಸದೂ ಅಲ್ಲದ, ವಿಕೃತವೂ ಅಲ್ಲದ, ವಿನೂತನವೂ ಅಲ್ಲದ, ಸುದೀರ್ಘವೂ ಅಲ್ಲದ, ರಾಂ, ಶ್ಯಾಂ ಎಂಬಂತೆ ಸಂಕ್ಷೇಪವೂ ಅಲ್ಲದ,ಯಾವ ದೇವರದೂ ಅಲ್ಲದ, ಯಾವ ವ್ಯಕ್ತಿಯದೂ ಆಗಿರದ, ಒಂದು ಒಳ್ಳೆಯ ಹೆಸರು ದೊರೆಯುವವರೆಗೆ ಅವನ ಗುಣಸ್ವಭಾವಗಳನ್ನು ಲಕ್ಷಿಸಿ 'ಪ್ರಶಾಂತ್' ಎಂದು ಕರೆದುಬಿಡಲೇ ಎಂದು ಒಮ್ಮೊಮ್ಮೆ ಯೋಚಿಸಿಬಿಡುತ್ತೇನೆ. ಆದರೆ ಆದಿಯ 'ಪ್ರ', ಅಂತ್ಯದ 'ತ್' ಎರಡೂ ಅಷ್ಟು ಹಿತವಾದ ಅಕ್ಷರಗಳಲ್ಲ. ನಡುವಿನ 'ಶ'ಕಾರವಂತೂ ತುಂಬ ಅಪಾಯದ್ದು, ದವಡೆಯಲ್ಲೇ ತೇಲುವ ಅಕ್ಷರ ! ನಮ್ಮ ಊರಿನವರ ಬಾಯಲ್ಲಿ 'ಪರಸಾಂತು' ಆದರೂ ನಾನೇನೂ ಮಾಡುವಂತಿಲ್ಲ ! ನಮ್ಮ ತಾಯಿಯವರು ಒಮ್ಮೆ ಕೇಳಿದಾಗ ಅವರಿಗೆ ಈ ಹೆಸರನ್ನು ಹೇಳಿಬಿಟ್ಟೆ. ಅವರು ಕೆಂಡವಾದರು ! "ಇದೇನು ಹೆಸರಿಟ್ಟೆ ! ಮನೆದೇವರ ಹೆಸರು ಇಡಲು ನಿನಗೆ ಇಷ್ಟವಿಲ್ಲದಿದ್ದರೆ ಆ 'ಗು' ಅಕ್ಷರ ಬಂದಿತ್ತಲ್ಲ, ಗುಂಡಪ್ಪ ಎಂದು ಏಕೆ ಇಡಬಾರದಿತ್ತು" ಎಂದು !

ಈಗ ಮಗುವಿನ ಹೆಸರಿನ ಲೋಕದಿಂದ ಹೊರಳಿ, ನಮ್ಮ ತಾಯಿಯ ಈ ಪ್ರಶ್ನೆಗೆ ಏನು ಉತ್ತರ ಹೇಳಬೇಕೆಂದು ಸಿದ್ಧತೆ ಮಾಡಿಕೊಳ್ಳುತ್ತಿದ್ದೇನೆ. ಮಗುವಿಗೆ ಎರಡು ವರ್ಷ ತುಂಬಿದರೂ ಹೆಸರಿನ ಸಮಸ್ಯೆ ಪೂರ್ಣವಾಗಿ ಬಿಡಿಸಲ್ಪಟ್ಟಿದೆ ಎಂದು ಧೈರ್ಯವಾಗಿ ಹೇಳಲಾರೆ. ಒಳ್ಳೆಯ ಹೆಸರಿಗಾಗಿ ನಿತ್ಯ ತಪಸ್ಸು ಮಾಡುತ್ತಿದ್ದೇನೆ. ಇಂದಲ್ಲ ನಾಳೆ ಬೆಳಕಿನ ಕಿರಣ ನನ್ನತ್ತ ಹರಿದು ಬರಬಹುದು. ನನ್ನ ಸಮಸ್ಯೆ ಪರಿಹಾರವಾಗಬಹುದು ; ಆಗದಿರುತ್ತದೆಯೆ ? ನನಗೇ ಒಮ್ಮೊಮ್ಮೆ ನಾಚಿಕೆಯೆನಿಸುತ್ತದೆ. ಈ ಹೆಸರಿಗಾಗಿ

ಇಷ್ಟೇಕೆ ಗೊಂದಲ ನನ್ನಲ್ಲಿ ? ಇದು ಕಾಲ ಮಹಿಮೆಯೊ ? ಅಲ್ಲದೆ ಏನು ?

ನಾಗರಿಕರಾದ ನಾವು ಯಾವುದೋ ಕೃತಕ ಆಕರ್ಷಣೆಗೆ ಒಳಗಾಗಿ ಸಣ್ಣ ವಿಷಯವನ್ನೂ ದೊಡ್ಡ ಸಮಸ್ಯೆಯನ್ನಾಗಿ ಮಾಡಿಕೊಳ್ಳುತ್ತಿದ್ದೇವೆ ಎನಿಸುತ್ತದೆ. ಯಾವುದಕ್ಕಾಗಿ ಹೋರಾಡಬೇಕು. ಯಾವ ಆದರ್ಶಕ್ಕಾಗಿ ದುಡಿಯಬೇಕು. ಯಾವ ಪ್ರಮುಖ ಕಾರ್ಯಸಾಧನೆಗಾಗಿ ನಮ್ಮ ಬದುಕಿನ ಒಂದೊಂದು ಕ್ಷಣವನ್ನೂ ಮೀಸಲಿಡಬೇಕು ಎಂಬ ಅರಿವು ನಮ್ಮಿಂದ ಜಾರಿಹೋದಂತೆ ತೋರುತ್ತದೆ. ಆಧುನಿಕ ಜೀವನ ಏನೋ ಮೋಹದ ಬಲೆಯನ್ನು ನಮ್ಮತ್ತ ಬೀಸುತ್ತಿದೆ. ನಮ್ಮ ಭಾಷೆ, ನಮ್ಮ ಸಂಸ್ಕೃತಿ, ನಮ್ಮ ನೆಲಗಳ ಗಾಳಿ ಬೆಳಕುಗಳನ್ನು ಮರೆತು ಬಣ್ಣದ ಕಾಗದದ ಗಾಳಿಪಟವಾಗುತ್ತಿದ್ದೇವೆ ! ಸಣ್ಣ ಹನಿ ಬಿದ್ದರೂ ಕರಗುವ, ಒಂದು ಕಡ್ಡಿ ಗೀಚಿದರೂ ಪರ್ ಎನ್ನುವ, ಸೂತ್ರ ಕಡಿದರೆ ಹಾರಿ ಅಷ್ಟು ದೂರ ಹೋಗಿ ಬೀಳುವ ಶಕ್ತಿಯೂ ಇಲ್ಲದ ಗಾಳಿಯ ಪಟಗಳು ನಾವು ! ಅನುಕರಣೆ ನಮ್ಮ ಜೀವನದ ಪ್ರಧಾನ ಸೂತ್ರ. ಕೃತಕತೆ, ಆಡಂಬರಗಳ ಕಡ್ಡಿಗಳನ್ನು ನೆಮ್ಮಿ ಪಟ ಹಾರುತ್ತದೆ ; ಆ ಕಡ್ಡಿಗಳಾದರೂ ಗಟ್ಟಿಯಾದ ತೆಂಗಿನ ಗರಿಯ ಕಡ್ಡಿಗಳಲ್ಲ ; ತಟಕ್ಕನೆ ಮುರಿದು ಬೀಳುವ ಹೆಂಚಿಯ ಕಡ್ಡಿಗಳು.

.. ......ಮನಸ್ಸು ತಟ್ಟನೆ ಗಂಭೀರವಾಗುತ್ತದೆ ; ಆಧುನಿಕ ಜೀವನವನ್ನು ವಿಶ್ಲೇಷಿಸಲು ಹೊರಟ ನಾನು ವಿಚಾರಪರನಂತೆ ಬುದ್ಧಿಯ ಬೆಳಕನ್ನು ಚೆಲ್ಲಿ ಸಮಸ್ಯೆಗಳನ್ನು ಬಿಡಿಸಲು ಹೋಗುತ್ತೇನೆ ! ಆದರೆ, ನಮ್ಮ ಮಗುವಿನ ಹೆಸರು ದೊಡ್ಡ ಸವಾಲಾಗಿ ನನ್ನ ಎದುರು ನಿಂತುಕೊಳ್ಳುತ್ತದೆ. ವಾಸ್ತವಿಕ ಜಗತ್ತು ಒಂದು ಕ್ಷಣ ವಿಕಟವಾಗಿ ನಗುತ್ತದೆ ! ಇಲ್ಲ ಈ ಬೇಸಿಗೆಯಲ್ಲಿ ವಿರಾಮವಾಗಿ ಕುಳಿತು ಒಂದು ಒಳ್ಳೆಯ ಹೆಸರನ್ನು ಹುಡುಕಲೇಬೇಕು !

# ರಾಕ್ಷಸಬಾಹು

ವಿಜ್ಞಾನದ ಕರಾಳಹಸ್ತ ನಮ್ಮ ಬದುಕಿನ ಶಾಂತಿ, ನೆಮ್ಮದಿಗಳನ್ನೆಲ್ಲ ಕಲಕಿದಂತಿದೆ. ಅದರ ಕರುಣೆಯ ಅಮೃತಕಿರಣಗಳು ಮಾನವಜೀವನವನ್ನು ಹಸನುಗೊಳಿಸಿವೆ, ಸುಖ, ಸಂತೃಪ್ತಿಯ ಬೆಳದಿಂಗಳ ಉಯ್ಯಾಲೆಯಲ್ಲಿ ತೂಗಿವೆ ಎಂಬ ಮಾತು ಸಂಪೂರ್ಣ ಸತ್ಯವೆಂದು ಹೇಗೆ ಹೇಳುವುದು ? ಜೀವನದ ಯಾವ ಕ್ಷೇತ್ರವನ್ನು ತೆಗೆದುಕೊಂಡರೂ ಅಲ್ಲೆಲ್ಲ ವಿಜ್ಞಾನದ ಚಂಚುಪುಟ ಇದೋ ನಿನಗಿಲ್ಲಿ ಸೌಲಭ್ಯವನ್ನು ಕಲ್ಪಿಸಿದ್ದೇನೆ, ನಿನ್ನ ಕೆಲಸವನ್ನು ಹಗುರಗೊಳಿಸಿದ್ದೇನೆ ನೀನು ತೂಕಡಿಸಿಕೊಂಡು ಬೇಕಾದರೂ ಈ ಜಗತ್ತಿನಲ್ಲಿ ಬದುಕನ್ನು ಸೀಗಿ ಕಣ್ಣು ಮುಚ್ಚಬಹುದು ಎಂದು ಸಾರುವಂತೆ ತೋರುತ್ತದೆ, ನಿಜ. ಆದರೆ ಆ ಸುಖ ಸೌಲಭ್ಯಗಳ ಬೆನ್ನ ಹಿಂದೆಯೇ ಒಂದು ಕ್ಷಣ ನುಗ್ಗರಿಸಿದರೂ ಬದುಕು ನುಗ್ಗು ನುರಿಯಾಗುತ್ತದೆ ಎಂಬ ಕಹಿ ಅನುಭವದ ವಿಷದ ಮಡುವನ್ನು ಮರೆಯುವುದು ಹೇಗೆ ?

ಕೊನೆಯ ಹಳ್ಳಿಯ ಬಂಧುಗಳ ಕೊಠಡಿಯಲ್ಲಿ ಮಲಗಿದಾಗ ವಿಚಿತ್ರ ಅನುಭವಗಳ ಮೆರವಣಿಗೆ ನನ್ನ ಕಣ್ಣಮುಂದೆ ಹಾದುಹೋದಂತಾಗುತ್ತದೆ. ಈ ಬಿ.ಎಚ್. ರಸ್ತೆಯ ಬದಿಯಲ್ಲೇಕೆ ಇವರು ಮನೆಯನ್ನು ಕಟ್ಟಿಸಿದರು ? ಈ ವಾಹನಗಳ ಓಡಾಟ, ಅವುಗಳ ಕರ್ಣಕಠೋರ ಶಬ್ದದ ಅನುಭವವಿದ್ದೂ ಇಲ್ಲಿ ವಾಸಿಸುವುದಾದರೂ ಹೇಗೆ ? ಕುಡಿದು ಮತ್ತೇರಿ ಆ ಕಾನ್‌ಕ್ರೀಟ್ ರಸ್ತೆ ಕೀರಾಡುವಂತೆ ನುಗ್ಗಿಬರುವ ಆ ಭಯಂಕರ ಲಾರಿಗಳು, ಯಾವುದೋ ಮೃತ್ಯು ಲೋಕದ ಮಂಜಿನ ದಾರಿಯಲ್ಲಿ ಹುಚ್ಚು ಆವೇಶದಲ್ಲಿ ನುಗ್ಗಿಬರುದ ಆ ಎಕ್ಸ್‌ಪ್ರೆಸ್ ಬಸ್ಸುಗಳು, ಕಂಡೂಕಾಣದಂತೆ ನುಸುಳಿ ಬಂದು, ಕೇಳಿಯೂ ಕೇಳದಂಥ ಸದ್ದನ್ನು ಒಂದು ಗಳಿಗೆ ಚೆಲ್ಲಿ ಮಿಂಚಿನಂತೆ ಮಾಯವಾಗುವ ಆ ಮಳ್ಳಿ ಕಾರುಗಳು, ಹತ್ತು ಮೈಲಿಯ ಆಚೆಯಿಂದಲೇ "ನಾನೂ ಬರುತ್ತಿದ್ದೇನೆ" ಎಂದು ಗುಡುಗಿ ಗುಡುಗಿ ಸಾರುತ್ತ ತಟ್ಟನೆ ತೂರಿಹೋಗುವ ಆ ಜಾವಾ ಗಾಡಿಗಳು– ಇದೇನು ವಿಜ್ಞಾನ ಕವಣೆಯನ್ನು ಬೀಸಿ ಚೆಲ್ಲಾಟವಾಡುತ್ತಿದೆಯೋ ಈ ರಸ್ತೆಯ ಮೇಲೆ ಎನಿಸಿ ಬಿಡುತ್ತದೆ !

ಮನೆಯ ಮುಂದೆ ಒಂದು ದೊಡ್ಡ ಆಲದಮರ ನಿಂತಿದೆ. ಬೇಸಿಗೆಯಲ್ಲಿ ಇಂದೂ ಅಲ್ಲೊಂದು ಅರವಟ್ಟಿಗೆಯನ್ನು ಹಾಕಿ ದಾರಿಹೋಕರಿಗೆ ನೀರುಮಜ್ಜಿಗೆ, ರಾಗಿ ಅಂಬಲಿಗಳನ್ನು ನೀಡುತ್ತಾರೆ. ಮೂಕಸಾಕ್ಷಿಯಾಗಿ ನಿಂತ ಆ ಹಳೆಯ ಮರ ಒಮ್ಮೊಮ್ಮೆ ವಿಕಟವಾಗಿ ನಗುತ್ತದೆ ! ತನ್ನನ್ನು ಅಲ್ಲಿ ಬೆಳೆಸಿದ ಉದ್ದೇಶ, ಹಿಂದಿನವರ ಔದಾರ್ಯ, ಧರ್ಮದೃಷ್ಟಿ, ಜನತೆಯ ಕಲ್ಯಾಣದತ್ತ ಅವರಿಗಿದ್ದ ವಿಶಾಲ ಮನೋಭಾವವನ್ನು ಅದು ಒಮ್ಮೊಮ್ಮೆ ನೆನೆಯುತ್ತದೆ. ಮಳೆ ಬಂದಾಗ ಜನ ಅದರ ಬುಡವನ್ನು ಆಶ್ರಯಿಸಿ ಅದರ ಭೀಕರ ಹೊಡೆತದಿಂದ ಪಾರಾಗುತ್ತಿದ್ದರು. ಇಬ್ಬದಿಯಲ್ಲಿಯೂ ತನ್ನಂತೆಯೇ ರಸ್ತೆಯ ಉದ್ದಕ್ಕೂ ನಿಂತ ಹೆಮ್ಮರಗಳ ಸಾಲಿನ ತಂಪು ನೆರಳಿನ ಹಾಸಿನಲ್ಲಿ ನಿರಾತಂಕವಾಗಿ ಸಾಗಿಹೋಗುತ್ತಿದ್ದ ಪಯಣದ ಬಂಡಿಗಳು, ಕಾಲ್ನಡಿಗೆಯಲ್ಲಿ ಸಾಗಿ ಬರುತ್ತಿದ್ದ ಪಯಣಿಗರು, ಜಾತ್ರೆಗೆ, ಸಂತೆಗೆ, ಅರಸೀಕೆರೆ, ತಿಪಟೂರುಗಳಂಥ ಪೇಟೆಗಳಿಗೆ, ಶಿವಮೊಗ್ಗ ಬೆಂಗನೂರುಗಳಂಥ ಪಟ್ಟಣಗಳಿಗೆ, ಚುಂಚನಗಿರಿ, ತಿರುಪತಿಗಳಂಥ ಪವಿತ್ರ ಕ್ಷೇತ್ರಗಳಿಗೆ ಹತ್ತಾರು ದಿನಗಳ ಪ್ರಯಾಣವನ್ನು ಮಾಡುತ್ತಿರಲಿಲ್ಲವೆ ! ಎತ್ತುಗಳ ಮಾರಾಟಕ್ಕೆ, ಮಲೆನಾಡಿನ ವ್ಯಾಪಾರಕ್ಕೆ ಎಷ್ಟೋ ದಿನಗಳ ಪ್ರಯಾಣವನ್ನು ಈ ರಸ್ತೆಯಲ್ಲಿಯೇ ಮಾಡುತ್ತಿರಲಿಲ್ಲವೆ ! ಒಳ್ಳೆಯ ಕಮಾನುಗಾಡಿಯಲ್ಲಿ ಕುಳಿತು, ಹೆಂಗಸರು ಮಕ್ಕಳೊಡನೆ ಯಾವುದಾದರೂ ಪವಿತ್ರಕ್ಷೇತ್ರಕ್ಕೆ ಯಾತ್ರೆ ಹೋಗುವುದೆಂದರೆ ಅದೆಷ್ಟು ಸುಂದರವಾದ ಅನುಭವ ! ಗಂಟೆಯ ಸರ, ಕೊಂಬು ಕಳಸ, ಮೊಗರಂಬಗಳನ್ನು ಧರಿಸಿದ ಒಳ್ಳೆಯ ಜೊತೆಯನ್ನು ಗಾಡಿಗೆ ಹೂಡಿ, ಮೊಸರನ್ನದ ಬುತ್ತಿಯನ್ನೊ, ಪಯಣದ ರೊಟ್ಟಿಯನ್ನೊ ಕಟ್ಟಿಕೊಂಡು ಅಥವಾ ನೀರು ದೊರೆತ ಸ್ಥಳದಲ್ಲಿ ಕೆಲಗಂಟೆ ನಿಂತು ಅಲ್ಲಿಯೇ ಅಡಿಗೆಮಾಡಿ, ಧರ್ಮಾರ್ಥವಾಗಿ ಕಟ್ಟಿದ ಬಾವಿಗಳ ಕಟ್ಟೆಗಳ ಮೇಲೆ ಆನಂದವಾಗಿ ಕುಳಿತು ಊಟ ಮಾಡಿ ಪಯಣವನ್ನು ಮುಂದುವರಿಸುವ ಸುಖ ಈಗ ಎಲ್ಲಿ ಬರಬೇಕು !

ಮನೆಯ ಮಡದಿ ಮಕ್ಕಳನ್ನು ಕಟ್ಟಿಕೊಂಡು ಒಳಗೆ ಕುಳಿತಿರುತ್ತಾಳೆ. ಅವಳ ಕೊರಳ ದೊಡ್ಡ ಗುಂಡಿನ ಸರ, ಚಿಂತಾಕು, ಅಡ್ಡಿಕೆಗಳು ಮಿರುಮಿರನೆ ಮಿಂಚುತ್ತಿರುತ್ತವೆ ಕರಿಮಣಿ ಸರದ ಒತ್ತಿನಲ್ಲಿ. ಕರಿಯ ಓಲೆ, ಮೂಗುಬೊಟ್ಟು, ಕೆನ್ನೆ, ಗಲ್ಲ, ಹಣೆಯ ಹಚ್ಚೆಯ ಗುರುತು, ಬಟ್ಟಲುಕುಂಕುಮಗಳ

ಆ ನಗೆಮುಖದ ಸ್ಫೂರ್ತಿಯಲ್ಲಿ ಗಾಡಿಯನ್ನು ಓಡಿಸುತ್ತ ಬಾರುಕೋಲನ್ನು ಬೀಸಿ, ಬಾಲವನ್ನು ತಿರುವಿ, ಒಮ್ಮೆ ಕೇಕೆ ಹಾಕಿ ಪಯಣದ ರೋಮಾಂಚನವನ್ನು ಅನುಭವಿಸುತ್ತಿದ್ದರೆ, ಬಂಡಿಯ ಎರಡು ಚಕ್ರಗಳ ನಡುವೆ ಸುರಕ್ಷಿತವಾದ ಸ್ಥಳದಲ್ಲಿ ಅದರ ವೇಗಕ್ಕೆ ತನ್ನ ಓಟವನ್ನು ಹೊಂದಿಸಿಕೊಂಡು, ಎತ್ತಿನ ತಾಳಬದ್ಧ ಹೆಜ್ಜೆಗಳ ಲಯವನ್ನು ಅನುಸರಿಸಿ ತಾನೂ ಅತ್ತಿತ್ತ ತೊನೆಯುತ್ತ ತೆರೆದ ಬಾಯ ಜೊಲ್ಲನ್ನು ಸುರಿಸುತ್ತ ಬರುವ ಮನೆಯ ನಾಯಿಯ ಸುಖಕ್ಕೂ ಎಣೆಯಿತ್ತೇ ! ವರ್ಷದ ದುಡಿಮೆಯ ದಣಿವನ್ನೆಲ್ಲ ನೀಗಿ ಕೊಳ್ಳುವಂತೆ ಜಾತ್ರೆಗೋ ಶಿವರಾತ್ರಿಗೊ ಮನೆಮಂದಿಯೆಲ್ಲ ಹೋಗಿ ಬರುತ್ತಿದ್ದ ಕಾಲ ಇನ್ನೆಲ್ಲಿ ! ಬೆಳದಿಂಗಳ ರಾತ್ರಿಗಳಲ್ಲಿ ಸಾಲುಮರಗಳು ತಲೆದೂಗುವಂತೆ, ಬಯಲು ಬೆಟ್ಟಗಳ ಕಿವಿ ನಿಮಿರುವಂತೆ, ಮೇಲೆ ತೇಲುವ ಬೆಳ್ಮೋಡಗಳ ಮರೆಯ ಚಂದ್ರನೂ ಕಿವಿಯನ್ನೊಮ್ಮೆ ಇತ್ತ ಕೊಡುವಂತೆ ಬಂಡಿಯ ಪದಗಳನ್ನು ಸಾರಥಿ ಹಾಡುತ್ತ ಗಾಡಿಯನ್ನು ಹೊಡೆಯುತ್ತಿದ್ದರೆ ಎಷ್ಟೋ ಹರಿದಾರಿಗಳು ಕರಗಿ ಹೋಗುತ್ತಿರಲಿಲ್ಲವೇ ಆ ಬಂಡಿಯ ಗಾಲಿಗಳ ಗಡ್‌ಗಡಕ್ ಸದ್ದಿನ ತಾಳದಲ್ಲಿ !

ಜೀವನದ ಸಾಹಸ, ಸ್ಪರ್ಧೆಗಳ ದಿನಗಳೆಲ್ಲ ದೂರ ಸರಿದು ಹೋದವು ! ಬದುಕಿನ ನಿಜವಾದ ಅರ್ಥದ ಸುಖದ ವಿಶಿಷ್ಟ ಅನುಭವಗಳೆಲ್ಲ ಹಿರಿಯರು ಹೇಳುವ ತಮ್ಮ ಕಾಲದ ಜಾನಪದವಾಗಿ ಉಳಿದು ಹೋದುವು ! ಮನುಷ್ಯ ಈ ಯಂತ್ರ ನಾಗರಿಕತೆಯಲ್ಲಿ ಏನಾಗುತ್ತಿದ್ದಾನೆ, ಆ ಬಸ್ಸಿನಂತೆ, ಲಾರಿಯಂತೆ, ಜೀಪಿನಂತೆ ಅವನದೂ ನಾಗಾಲೋಟದ ಬದುಕು. ಏನೋ ಅವಸರ, ಗಡಿಬಿಡಿ, ಗೊಂದಲ ! ಯಾವುದರಲ್ಲೂ ಅವನಿಗೆ ಕಷ್ಟ ಆಗದು ! ಬಸ್ಸಿನ ಸೌಕರ್ಯವಿದ್ದರೆ ಒಂದು ಮೈಲಿಯನ್ನೂ ನಡೆಯಲಾರ ! ಬಸ್ಸು ತಪ್ಪಿಹೋದರೆ ಆ ಇಲಾಖೆಯನ್ನೇ ಬಯ್ಯುತ್ತ ಆ ದಿನದ ಪಯಣವನ್ನಾದರೂ ನಿಲ್ಲಿಸಿ ಮತ್ತೊಂದು ದಿನ, ಮಗದೊಂದು ದಿನ ಹೋದಾನು ! ಒಂದು ಗಂಟೆಯ ಕಾಲುನಡಿಗೆ ಅವನಿಗೆ ಆಗದು !

ತೊಂಬತ್ತು ವರ್ಷದ ಗಡಿಗಳನ್ನು ದಾಟಿರುವ ನಮ್ಮ ತಾತನವರು ತಮ್ಮ ಕಾಲದ ಗಾಡಿಯ ಪಯಣದ ಸುಖವನ್ನು ಈಗಲೂ ನೆನೆದುಕೊಳ್ಳುತ್ತಾರೆ. ಗಾಡಿಯೇನು ಕಾಲ್ನಡಗೆಯ ಸೊಗಸನ್ನೂ ಆಗಾಗ ಸವಿಯುತ್ತಾರೆ.

ದಾರಿಯಲ್ಲಿ ಕಳ್ಳರು ತಡೆದುದುಂಟು, ಅದರಿಂದ ಪಾರಾಗಿ ಬಂದಿದ್ದಾರೆ. ದುಷ್ಟ ಜಂತುಗಳು ಅಡ್ಡ ಬಂದುದುಂಟು, ಅವಕ್ಕೂ ಅಂಜದೆ ಬಂದಿದ್ದಾರೆ! ಸೊಗಸಾದ ರುಮಾಲನ್ನು ಸುತ್ತಿ, ಕಚ್ಚೆಯನ್ನು ಹಾಕಿ, ಮೈತುಂಬ ನಿಲುವಂಗಿಯನ್ನು ಹಾಕಿ, ಛತ್ರಿಯನ್ನು ಹಿಡಿದು, ಜರ್ಕಿನ ಜೋಡನ್ನು ಮೆಟ್ಟಿ ನಡೆಯುವ ಕಾಲ ಹೋಯಿತು ಎನ್ನುತ್ತಾರೆ. ನಮ್ಮ ದಾಸಪ್ಪನ ಟೈರ್ ಸೋಲಿನ ಚಪ್ಪಲಿಯನ್ನು ಅವರು ಮೆಟ್ಟುವ ಕಾಲ ಬಂದಿತು! ನಡೆದರೆ ಸದ್ದಿಲ್ಲ, ಕಾಲಿಗೆ ಬಿಗಿಯಿಲ್ಲ, ಆ ಜರ್ಬು, ಜೇಂಕಾರವಾವುದೂ ಇಲ್ಲ. ಆದರೂ ಅವರ ನಡಗೆಯ ವೇಗ, ವೈಖರಿ, ಈಗ ನಮಗೆ ಯಾರಿಗೂ ಬರದು! ಈ ವಯಸ್ಸಿನಲ್ಲೂ ಐದು ಮೈಲಿ ದೂರದ ಹೊನ್ನಶೆಟ್ಟಿ ಹಳ್ಳಿಯ ತಮ್ಮ ಮಗಳ ಮನೆಗೆ ನಡೆದುಕೊಂಡೇ ಅವರು ಹೋಗಿಬಿಡುತ್ತಾರೆ.

ಹಿಂದಿನವರ ಆ ದೈಹಿಕ ಶಕ್ತಿ, ಮಾನಸಿಕ ಸ್ಥಿರತೆಯಾದರೂ ಈಗ ಯಾರಲ್ಲಿದೆ! ಕಾಲ ಬಲ, ತೋಳ ಬಲ ಎಂದೋ ದೂರವಾಗಿ ಹೋದುವು. ಹೊತ್ತಿನಂತೆ ಎದ್ದು ಒಳ್ಳೆಯ ತಂಗಳು ಮುದ್ದೆಯನ್ನು ಉಪ್ಪಿನಲ್ಲಿ ಮಿದಿದು, ಈರುಳ್ಳಿಯನ್ನೋ ಮೆಣಸಿನ ಕಾಯನ್ನೋ ನೆಂಚಿಕೊಂಡು ಪಿಣ್ಣಗೆ ಉಂಡು ಹೊಲಕ್ಕೆ ಹೋದರೆ, ಒಂಬತ್ತು ಗಂಟೆಯ ವೇಳೆಗೆ ಹೊಟ್ಟೆ ಗಾವ್ ಗಾವ್ ಎನ್ನುತ್ತಿದ್ದ ಕಾಲ ಅದು! ಹುರುಳಿಕಾಳು ಕಾರ ಮೊಗೆಯಲ್ಲಿ ಮಜ್ಜಿಗೆ ತುಂಬಿಕೊಂಡು ಸೊಗಸಾದ ಎರಡು ರಾಗಿಯ ರೊಟ್ಟಿಯನ್ನು ಹೊತ್ತು ಮನೆಯ ಗರತಿ ಆಳುದ್ದ ಹೊತ್ತಿಗೆ ಬರದಿದ್ದರೆ ಊರದಾರಿಯ ಕಡೆಯೇ ನೋಡಿ ನೋಡಿ ಸಿಡಿಮಿಡಿಗೊಳ್ಳುತ್ತಿದ್ದ ದಿನ ಇವಲ್ಲ! ಹೊತ್ತು ನೆತ್ತಿಗೇರುವ ವೇಳೆಗೆ ಮತ್ತೆ ಆರು ಬಿಟ್ಟುಕೊಂಡು ಬಗಬೇಕು. ಮಸೊಪ್ಪು ಮಾಡಿ, ಎರಡು ದೊಡ್ಡ ಚೆಂಡುಗಳನ್ನು ತಣಿಗೆಯ ತುಂಬ ಇಕ್ಕಿ ಇಷ್ಟು ದೊಡ್ಡ ಉಂಡೆ ಬೆಣ್ಣೆಯನ್ನು ಹಾಕಿದರೆ ಆ ಊಟದ ಗತ್ತು ಅವನ ಮೈಕಟ್ಟಿನಲ್ಲಿ ಪ್ರತಿಫಲಿಸುತ್ತಿತ್ತು!

ಈಗ ನಮ್ಮ ಲಕ್ಷ್ಮಯ್ಯ, ರಸ್ತೆಯ ಬದಿಯಲ್ಲಿ ಸೋಗೆಯ ಗುಡಿಸಲನ್ನು ಹಾಕಿ, ಹೊಸದಾಗಿ ತಂದ 'ರೇಡಿ' ಹಾಕಿ ಆಲದ ಮರದ ಕೆಳಗಿನ ಆ ಹಳೆಯ ಅರವಟ್ಟಿಗೆಯನ್ನು ಅಣಕಿಸುತ್ತಾನೆ. ಬೆಳಗ್ಗೆ ಬೇಗ ಎಚ್ಚರವಾದರೆ ಕಿಟಕಿಯಿಂದಾಚೆ ನೋಡಿದಾಗ ಆರುಕಟ್ಟುವ ಮೊದಲೇ 'ಕಾಪಿ'

ಕುಡಿಯಲು ಹಳ್ಳಿಯ ಕಟ್ಟಾಳುಗಳಿಲ್ಲ ಬರುತ್ತಾರೆ. ನೇಗಿಲನ್ನು ಹೊರುವ ಶಕ್ತಿ ಅವರಿಗೆ ಯಾವಾಗಲೋ ಹೊರಟುಹೋಗಿದೆ ! ಬೆಳಗ್ಗೆ ಕುಡಿದ ಆ ನೀರು ಹಾಲಿನ ಬೆಲ್ಲದ ಕಾಫಿ ಹತ್ತು ಗಂಟೆಯವರೆಗೆ ಅವನ ಜೀವನನ್ನು ತಡೆದು ಹಿಡಿಯುತ್ತದೆ! ಆಮೇಲೆ ಮನೆಯ ಲಕ್ಷ್ಮಿ ಮಿಳ್ಳೆಯಲ್ಲಿ ಕಾಫಿ, ಅಕ್ಕಿನುಚ್ಚಿನ ಉಪ್ಪಿಟ್ಟುಗಳನ್ನು ತಂದು ಗಂಡನಿಗೆ ಜೀವ ತುಂಬಬೇಕು. ಅಷ್ಟು ಇಷ್ಟು ಕೆರೆದು ಬಿಸಿಲಿಗೆ ಮೈ ಚುರುಕ್ ಎನ್ನುವ ಮೊದಲೇ ಮನೆಗೆ ಬಂದುಬಿಡಬೇಕು!

ಇತ್ತ ಪುಷ್ಟಿಯಾದ ಆಹಾರವೂ ಇಲ್ಲ, ಅತ್ತ ಸರಿಯಾದ ದೈಹಿಕ ಶ್ರಮವೂ ಇಲ್ಲ, ಒಂದು ಹನಿ ಬೆವರು ಬೀಳದಂತೆ ಹೇಗೋ ಕಾಲ ತಳ್ಳಿ ಬಿಡುವ ಈ ದಿನಗಳಲ್ಲಿ ಕಟ್ಟುಮಸ್ತಾದ ಆಸಾಮಿಗಳನ್ನು ನೋಡುವುದಾದರೂ ಎಂತು!

ಕೊನೆಹಳ್ಳಿಯ ಆಲದ ಮರ ಈಗಲೂ ನೆನೆದುಕೊಳ್ಳುತ್ತದೆ! ಆ ಹಳ್ಳಿಯ ರಸ್ತೆಯಲ್ಲಿ ಹೋರಿಗಳನ್ನು ಹೊಡೆದುಕೊಂಡು ಬಂದು ಆಚೆಯ ಬಯಲಿನಲ್ಲಿ ನಿಂತ ಬಡಗು ಸೀಮೆಯ ಗೊಲ್ಲರ ಅಜ್ಜಗಳ ನೆನಪು ಹಾದುಹೋಗುತ್ತದೆ ಅದರ ಮುಂದೆ! ತಲೆಯಲ್ಲಿ ಮಾಸಲು ವಸ್ತ್ರವನ್ನೇನೋ ಸುತ್ತಿರುತ್ತಿದ್ದರು ನಿಜ. ಮಂಡಿಯಿಂದ ಮೇಲಕ್ಕೆ ಬಗಿದು ಕಟ್ಟಿದ ಪಂಚೆ, ಬರಿಯ ಮೈಯ ಆ ಹೆಗಲಿನ ಮೇಲೊಂದು ಮಡಿಸಿದ ಕಂಬಳಿ, ಇನ್ನೊಂದು ಹೆಗಲಿನಲ್ಲಿ ಅವನ ಪಯಣದ ಪದಾರ್ಥಗಳನ್ನೆಲ್ಲ ತುಂಬಿಕೊಂಡ ಕಲ್ಲಿ, ನೂರಾರು ಕುರಿಗಳನ್ನು ಬಯಲಿನಲ್ಲಿ ಮೇಯಲು ಬಿಟ್ಟು ಕೋಲನ್ನು ನೆಲಕ್ಕೆ ಊರಿ ಒಂದು ಕಾಲನ್ನು ಮಡಿಸಿ, ಮತ್ತೊಂದು ಕಾಲಿನ ಆಧಾರದ ಮೇಲೆ ಎಷ್ಟೋ ಹೊತ್ತಿನವರೆಗೆ ನಿಂತುಕೊಳ್ಳು, ತ್ತಿದ್ದ ಚಿತ್ರ ಅದರ ಮನಸ್ಸಿನಲ್ಲಿ ಇನ್ನೂ ಮಾಸಿಲ್ಲ. ನೆರಳನ್ನು ಅರಸಿ ಅವನು ಬರುತ್ತಿದ್ದುದೇ ವಿರಳ.

ಆಲದಮರ ತನ್ನ ಬುಡದ ಅರವಟ್ಟಿಗೆಯತ್ತ ಒಮ್ಮೆ ದೃಷ್ಟಿಯನ್ನು ತಗ್ಗಿಸಿ ನೋಡುತ್ತದೆ; ರಸ್ತೆಯಾಚೆಯ ಲಕ್ಷ್ಮಯ್ಯನ ಹೋಟಲಿನ ಕಡೆಗೆ ಒಮ್ಮೆ, ಕಣ್ಣಿಟ್ಟು ನಿಟ್ಟುಸಿರುಬಿಡುತ್ತದೆ. ಈ ಕಡೆ ತನ್ನ ತೆಂಕಣ ರೆಂಬೆಯ ತುದಿಗೆ ತಾಗಿದಂತೆಯೇ ಇರುವ ನಮ್ಮ ಬಂಧುಗಳ ಮನೆಯ ಕಡೆ ಇನ್ನೊಮ್ಮೆ ಕನಿಕರ

ದಿಂದ ನೋಡುತ್ತದೆ! ರಸ್ತೆಯ ಕರಾಳ ಶಬ್ದ ಪ್ರಹಾರಗಳನ್ನು ಸಹಿಸಿಕೊಂಡು ಈ ಮನೆಯವರು ಬದುಕಲೇಬೇಕಾಗಿದೆಯಲ್ಲ ಎಂಬ ಮರುಕವಿರಬೇಕು ಅದಕ್ಕೆ! ಆಲದ ಮರದ ಕರುಳು ಕರಗುವುದು ತನ್ನ ನೆರಳಿನಲ್ಲಿ ಗಂಟೆಗಟ್ಟಲೆ ಬಸ್ಸಿಗಾಗಿ ಕಾದು ಕುಳಿತ ಜನರನ್ನು, ಅವರ ಚಿಂತಾಜನಕ ಪರಿಸ್ಥಿತಿಯನ್ನು ಕಂಡಾಗ!

ಮೇಲೆ ಬಿಸಿಲು ಕಾಯುತ್ತದೆ! ಕೆಳಗೆ ಟಾರು ರಸ್ತೆಯ ಮೈ ಹೊಗೆ ಯೇಳುತ್ತದೆ. ಹೊಗೆಯನ್ನು ಕಾರುತ್ತ, ಅರ್ಭಟಿಸುತ್ತ ಹತ್ತಾರು ವಾಹನ ಗಳು ಆ ಕಡೆಯಿಂದ ಈ ಕಡೆಗೆ ಈ ಕಡೆಯಿಂದ ಆ ಕಡೆಗೆ ಸಂಚರಿಸುತ್ತವೆ. ಕೆಲವು ನಿಲ್ಲುತ್ತವೆ; ಕೆಲವು ಕೈಯಾಡಿಸಿ ಮುಂದೆ ಹೋಗುತ್ತವೆ! ಬೆಳಗಿನಿಂದ ರಾತ್ರಿಯ ವರೆಗೆ ಜನರ ಸಣ್ಣಗುಂಪು ಅಲ್ಲಿ ಕಲೆಯುತ್ತಲೇ ಇರುತ್ತದೆ! ಕರಗುತ್ತಲೇ ಇರು ತ್ತದೆ! ಬಹುಶಃ ರಾತ್ರಿಯೆಲ್ಲ ಈ ವಾಹನ ಸೌಕರ್ಯವಿದ್ದರೆ ಆಗಲೂ ನಿರಂತರ ವಾಗಿ ಇಂಥ ಒಂದು ಗುಂಪು ಅಲ್ಲಿ ಇದ್ದೇ ಇರುತ್ತಿತ್ತು! “ ಜನರೇಕೆ ಹೀಗೆ ಹುಚ್ಚರಂತೆ ಅಲೆಯುತ್ತಾರೆ!” ಎಂಬುದೇ ಅದರ ಪ್ರಶ್ನೆ!

ಆ ಕಾಲವೂ ಅದಕ್ಕೆ ಗೊತ್ತಿದೆ! ಅಷ್ಟೇ ಹಳ್ಳಿಗಳು. ಜನರೂ ಬಹು ಮಟ್ಟಿಗೆ ಅಷ್ಟೇ ಮಂದಿ ! ಇದೇ ರಸ್ತೆ....ಇದೇ ಸಾಲುಮರಗಳು! ಆಗಿನ್ನೂ ವಾಹನ ಸೌಕರ್ಯ ಇಲ್ಲದ ದಿನಗಳಲ್ಲಿ, ತಾನು ನೋಡುತ್ತಿರಲಿಲ್ಲವೇ! ಯಾವಾ ಗಲೋ ಆಗೊಂದು ಈಗೊಂದು ಗಾಡಿ ಹಾದುಹೋಗುತ್ತಿತ್ತು! ಕುದುರೆಗಳ ಮೇಲೊ, ಎತ್ತುಗಳ ಮೇಲೊ ಕತ್ತೆಗಳ ಮೇಲೊ ಹೇರುಗಳನ್ನು ಸಾಗಿಸಿ ಕೊಂಡು ಬಣಜಿಗರು ಬರುತ್ತಿದ್ದರು. ಕಾಲುನಡಗೆಯಲ್ಲಿಯೂ ಕೆಲವರು ವಿರಳವಾಗಿ ಕಾಣಿಸಿಕೊಳ್ಳುತ್ತಿದ್ದರು! ಉಳಿದ ವೇಳೆಯಲ್ಲಿ ಕಣ್ಣುಮುಚ್ಚಿ ಸಂತೃಪ್ತಿಯಾಗಿ ತಾನು ನಿದ್ದೆಮಾಡುತ್ತಿತ್ತು! ರಾತ್ರಿಯ ಕಾಲದಲ್ಲಂತೂ ಅದರ ಶಾಂತಿಗೆ ಯಾವ ಧಕ್ಕೆಯೂ ಇರುತ್ತಿರಲಿಲ್ಲ. ಏಕೆಂದರೆ ಕತ್ತಲೆ ದಟ್ಟವಾದಂತೆ ಜನ ಗಾಡಿಗಳನ್ನು ಬಿಟ್ಟು ಇಲ್ಲಿಯೇ ತಂಗಿ ಬಿಡುತ್ತಿದ್ದರು!

ಆದರೆ ಈಗ!

ನೂರಾರು ಜನ ನಿತ್ಯವೂ ಬರುತ್ತಾರೆ, ಎಲ್ಲ ಬಸ್ಸುಗಳೂ ತುಂಬಿ ತೂರಾಡಿ

ಕೊಂಡೇ ಸಾಗುತ್ತವೆ! ಜನ ಹೋಗುತ್ತಾರೆ! ಬರುತ್ತಾರೆ! ಗಾಣದ ಎತ್ತಿನಂತೆ ಸುತ್ತಿಸುತ್ತಿ ಸೊರಗುವ ಈ ರಹಸ್ಯ ಅದಕ್ಕಿನ್ನೂ ಅರ್ಥವಾಗಿಯೇ ಇಲ್ಲ! ಸೌಲಭ್ಯಗಳು ಹೆಚ್ಚಿದಂತೆಲ್ಲ ಜನರು ಸುಲಭ ಆಕರ್ಷಣೆಗೆ ಒಳಗಾದರೆ! ಅಗತ್ಯ ಕಾಣಲಿ ಕಾಣದಿರಲಿ ತಿರುಗುವುದೊಂದು ಚಟವಾಗಿ ಅವರಲ್ಲಿ ಬೆಳೆಯಿತೆ! ಉಗುರಿನಲ್ಲಿ ಹೋಗುವುದಕ್ಕೆ ಅವರು ಕೊಡಲಿಯನ್ನು ಬಳಸುತ್ತಿದ್ದಾರೆಯೇ! ಸದಾ ಪ್ರಯಾಣಶೀಲರಾದ ಇವರು ಒಂದೆಡೆ ನಿಂತು ದುಡಿಯುವುದಾದರೂ ಹೇಗೆ! ತಮ್ಮ ಮನೆ ಮಠ ಹೆಂಡತಿಮಕ್ಕಳ ಹೊಣೆಯೆಂತು! ಇದ್ದಕ್ಕಿದ್ದಂತೆಯೇ ಕೆಲವು ಕಾಲ ಈ ವಾಹನಗಳನ್ನೆಲ್ಲ ನಿಲ್ಲಿಸಿಬಿಟ್ಟರೆ!

ಆಲದ ಮರದ ರೆಂಬೆಯಂಚಿನಲ್ಲಿ ಕಿರುನಗೆಯೊಂದು ಚಿಮ್ಮಿಹೋಗುತ್ತದೆ!

ಜನರಲ್ಲಿ ಹಾಹಾಕಾರವೇಳುತ್ತದೆ! ಜೀವನದ ಸ್ಥಿತಿಗತಿ ಮೇಲುಕೆಳ ಗಾಗುತ್ತದೆ. ಲೋಕ ತಲ್ಲಣಗೊಳ್ಳುತ್ತದೆ! ಆದರೆ ಕುಡಿತದಂತೆ, ಸಿಗರೇಟಿ ನಂತೆ, ಕಾಫಿಯಂತೆ ಇದೂ ಒಂದು ಚಟವಲ್ಲವೆ? ತಟ್ಟನೆ ಪಾನನಿರೋಧ ಜಾರಿಗೆ ಬಂದರೆ! ಹಳ್ಳಿ ಹಳ್ಳಿಯಲ್ಲಿಯೂ ಕಳ್ಳಭಟ್ಟಿಗಳು ಕಾಣಿಸಿಕೊಳ್ಳುತ್ತವೆ! ತಿರುಗುವುದಕ್ಕೆ ಅಂಟಿಕೊಂಡ ಜನ ಅವರು! ಹೋಗುವ ದಾರಿಗಳನ್ನು ಕಂಡುಕೊಳ್ಳರೇ!

ಮಹತ್ತಿನ ಕಡೆ ಬೃಹತ್ತಿನ ಕಡೆ ಈಗ ಯಾರಿಗೆ ಲಕ್ಷ್ಯ! ಆಳಕ್ಕೆ ಇಳಿಯು ವುದಕ್ಕಿಂತ ಈಜುಬುರುಡೆಯ ನೆರವಿನಿಂದ ಮೇಲೆ ಮೇಲೆ ತೇಲುವ ಸುಖವೇ ತೃಪ್ತಿಯನ್ನು ತಂದಂತೆ ಕಾಣುತ್ತದೆ. ಒಂದೆಡೆ ಕೂರಲು, ಕುಳಿತು ಏನನ್ನಾ ದರೂ ಅಳೆಯಲು, ಬೆಳೆಯಲು ಈಗ ಕಾಲವೆಲ್ಲಿದೆ? ತಾಳ್ಮೆ ಎಲ್ಲಿದೆ? ಬೆಳೆಯುವ ಅಗತ್ಯವಾದರೂ ಏನಿದೆ! ವಿಜ್ಞಾನ ನಮ್ಮ ಕಾಲವನ್ನು ನುಂಗಿದೆ! ನಮ್ಮ ಗೊತ್ತಿ ನಿಂದ ನಮ್ಮನ್ನು ಬಿಟ್ಟು, ಮೂಗುದಾರವನ್ನು ಹರಿದು ಬಯಲಿಗೆ ಅಟ್ಟಿದೆ! ಗರಿಕೆಯ ಕಂತೆಯನ್ನು ಕಣ್ಣಹತ್ತಿರಕ್ಕೆ ಚಾಚುತ್ತ ಚಾಚುತ್ತ ಬಿಸಿಲುಗುದು ರೆಯ ಬೆನ್ನಿನ ಮೇಲೆ ಎತ್ತಲೋ, ಎಲ್ಲಿಗೋ ಓಡಿಸಿಕೊಂಡು ಹೋಗುತ್ತಿದೆ, ಬಸ್ಸಿನ ಮೇಲೆ, ವಿಮಾನದ ಮೇಲೆ ಜನ ಸುತ್ತುತ್ತಲೇ ಇದ್ದಾರೆ! ಲಾರಿಯಲ್ಲಿ

ಜನ, ಕಾರಿನಲ್ಲಿ ಜನ, ಇಗ್ಗಾಲಿಗಳಲ್ಲಿ ಜನ...ಲೋಕವೆಲ್ಲ ಬಿ. ಎಚ್. ರಸ್ತೆಯ ವಾಹನಗಳಲ್ಲೇ ಹರಿದಾಡುತ್ತಿರುವಂತೆ ತೋರುತ್ತದೆ! ಎತ್ತ ನೋಡಿದರೂ, ಯಾವಾಗ ನೋಡಿದರೂ ಅಲೆತ ! ಅಲೆತ !! ಅಲೆತ !!! ಅಲೆಮಾರಿಜನಗಳೂ ನಾಚುವಂಥ ಅಲೆತ !

ಆ ವಾಹನಗಳದಾದರೂ ಏನು ತಪ್ಪು! ತನ್ನನ್ನು ಏರಿದವರಾರಿಗೂ ಅದು ರಕ್ಷಣೆಯ ಹೊಣೆಯನ್ನು ಹೊರುವುದಿಲ್ಲ! ಯಾವ ಗಳಿಗೆಯಲ್ಲಾದರೂ ತನ್ನ ಮುಂದಿನ ಗಾಲಿ ಕುಸಿಯಬಹುದು! ಯಾವುದೋ ಹಳ್ಳಕ್ಕೆ ತಲೆಕೆಳಗಾಗಿ ಉರುಳಬಹುದು ; ಎದುರು ದಿಕ್ಕಿನಿಂದ ಬಂದ ಲಾರಿಗೆ ಅಪ್ಪಳಿಸಿ ಜಜ್ಜಿ ಹೋಗಬಹುದು; ಯಾವುದೋ ಎತ್ತನ್ನೋ, ಎಮ್ಮೆಯನ್ನೋ, ನಾಯಿಯನ್ನೋ ಉಳಿಸಲು ಹೋಗಿ ತನ್ನಲ್ಲಿದ್ದ ಅರುವತ್ತು ಜನರನ್ನೂ ಒಂದೇ ತುತ್ತಾಗಿ ಅರ್ಪಿಸಬಹುದು ! ತಾನು ನಿಂತಲ್ಲಿಯೇ ಮತ್ತೊಂದು ಕುರುಡು ಲಾರಿ ಬಂದು ಅದಕ್ಕೆ ಬಡಿದು ಓಡಿಹೋಗಬಹುದು ! ಆದರೂ ಜನ ನುಗ್ಗಿ ಬರುತ್ತಾರೆ ; ಸ್ಥಳವಿರಲಿ, ಇಲ್ಲದಿರಲಿ ಜೋತುಬಿದ್ದಾದರೂ ಪಯಣ ಮಾಡಲೇಬೇಕು. ಮುಂದೇನು ? ಆ ಭರವಸೆಯಾದರೂ ಯಾರಿಗಿದೆ? ಮನೆಯಿಂದ ಹೊರಟವರು ಮತ್ತೆ ಮರಳಿದಾಗಲೇ ಬದುಕಿದ್ದೇವೆ ಎಂದುಕೊಳ್ಳಬೇಕು. ಒಂದೊಂದು ವಾಹನವೂ ಒಬ್ಬೊಬ್ಬ ಯಮದೂತನ ಪ್ರತಿರೂಪ ; ಘೋರ ರಕ್ಕಸರೆಲ್ಲ ಈ ವಾಹನಗಳ ರೂಪಿನಲ್ಲಿ ಕಾಣಿಸಿಕೊಂಡಿದ್ದರೂ ಅಚ್ಚರಿಯ ವಿಷಯವಲ್ಲ ! ಏಕೆಂದರೆ ಅರಸೀಕೆರೆ ತಿಪಟೂರುಗಳ ನಡುವೆಯೇ ಆ ಹತ್ತೊಂಬತ್ತು ಮೈಲಿಯ ಅಂತರದಲ್ಲಿ ಸಾಕಷ್ಟು ವಾಹನಗಳು ತಮ್ಮ ನಿಜರೂಪವನ್ನು ತೋರಿವೆ ! ಬೆಂಗಳೂರಿನಿಂದ ಹೊನ್ನಾವರದವರೆಗೆ ನೂರಾರು ಮೈಲಿಗಳ ಅಂತರದವರೆಗೆ ಮಲಗಿರುವ ಅಜಗರ ಬಿ. ಎಚ್. ರಸ್ತೆ. ಅದರ ಮೈಮೇಲೆ ನಿತ್ಯವೂ ರಕ್ತತರ್ಪಣ ಆಗದಿದ್ದರೆ ಅದಕ್ಕೆ ತೃಪ್ತಿಯಿಲ್ಲ ! ಎಲ್ಲಿಯೋ, ಯಾವುದೋ ಮೇಡಿನಲ್ಲಿ, ಕಾಡಿನಲ್ಲಿ ಲಾರಿ ಮರಕ್ಕೆ ಡಿಕ್ಕಿ ಹೊಡೆದಿರುತ್ತದೆ ; ಬಸ್ಸು ದಾರಿ ತಪ್ಪಿ ಕಮರಿಯನ್ನು ಅಪ್ಪಿರುತ್ತದೆ ; ಗಾಡಿಯ ಮೇಲೆ ನುಗ್ಗಿರುತ್ತದೆ ! ನಿಂತವರ ಮೇಲೆ ಕುಳಿತವರ ಮೇಲೆ ಧಾಳಿ ಮಾಡಿರುತ್ತದೆ. ಅನೇಕ ವೇಳೆ ಟೆಲಿಫೋನ್ ಕಂಬಗಳು, ಮೈಲಿಗಲ್ಲುಗಳು, ಸೇತುವೆಗಳು, ರಸ್ತೆಯಂಚಿನ

ಸಾಲುಗಲ್ಲುಗಳು ಗುಡಿಸಿಹೋಗಿರುತ್ತವೆ. ಗುಡಿಸಲುಗಳ ಮೇಲೆ, ಅಂಗಡಿಗಳ ಮೇಲೆ, ಕುರಿಮಂದೆಗಳ ಮೇಲೆ ನುಗ್ಗಿ ನುರಿಮಾಡುತ್ತವೆ! ವಾಹನಗಳಲ್ಲಿ ಕುಳಿತವರಿಗೆ, ಅವುಗಳ ಅಕ್ಕಪಕ್ಕದಲ್ಲಿ ಸಂಚರಿಸುವವರಿಗೆ, ಮುಗ್ಧರಂತೆ ರಸ್ತೆಯ ಬದಿಯಲ್ಲಿ ಕುಳಿತವರಿಗೆ ಯಾವ ಗಳಿಗೆಯಲ್ಲಿ ಏನೇನು ಅನಾಹುತ ಅಪ್ಪಿಕೊಳ್ಳುತ್ತದೊ! ಆದರೂ ಜನ ಪ್ರಯಾಣದಲ್ಲಿ ಒಂದು ಮೋಜನ್ನು ಕಂಡಿದ್ದಾರೆ; ಸದಾ ಭ್ರಮಣಶೀಲರಾಗಿದ್ದಾರೆ! ಅಲೆದಿದ್ದಾರೆ....ಅಲೆಯುತ್ತಲೇ ಇದ್ದಾರೆ!

ಆಲದ ಮರ ತಟಕ್ಕನೆ ಕಣ್ಣು ತೆರೆಯಿತು! ಅದರ ಶರೀರಾದ್ಯಂತ ಬೆಂಕಿ ಚೆಲ್ಲಿದಂತಾಯಿತು! ನರನಾಡಿಯೆಲ್ಲ ಅದುರಿದಂತಾಗಿ ಅದು ಹೌಹಾರಿತು! ಕಿಟಕಿಯಂಚಿನಲ್ಲಿ ಕುಳಿತ ನಾನೂ ಬೆಚ್ಚಿ ಅತ್ತ ದೃಷ್ಟಿಯನ್ನು ಚೆಲ್ಲಿದೆ! ಸರಕಾರಿ ಬಸ್ಸೊಂದು ಹಿಡಿತ ತಪ್ಪಿ ಆಲದ ಮರವನ್ನು ಗುದ್ದಿಕೊಂಡು ಅತ್ತ ಹೊಲದಲ್ಲಿ ಹೋಗಿ ನಿಂತಿತು! ಒಳಗಿದ್ದವರು ಕಂಗಾಲಾಗಿ ಕುಸಿದರು! ಕೆಲವರ ಕೈ, ಕೆಲವರ ಕಾಲು, ಕೆಲವರಿಗೆ ಇದ್ದ ಎರಡು ಕಿವಿಗಳೂ ಸಂಪಿಗೆಯ ಮೂಗೂ ಹರಿಯಿತು ಅಷ್ಟೆ!

ಆಲದ ಮರ ದೀರ್ಘ ನಿಟ್ಟುಸಿರು ಬಿಟ್ಟಿತು ! ಆ ವಾಹನ ತನಗೇ ಗುದ್ದಿದ್ದರೇ! ಗುದ್ದಿದ್ದರೇ....?

ವಿಜ್ಞಾನ ತನ್ನ ಹತ್ತು ಕೈಗಳಲ್ಲೂ ಮಾನವನನ್ನು ಸುಖಸ್ವಪ್ನದ ಸಿಂಗಾರದ ವನದಲ್ಲಿ ಮೆರೆಸುತ್ತಿದ್ದರೂ, ನಮಗೆ ಗೋಚರವಾಗದಂತೆಯೇ ನಮ್ಮ ಮೇಲೆ ಭಯಂಕರ ರಾಕ್ಷಸಬಾಹು ಚಾಚಿಕೊಂಡಿದೆ. ಹೆಜ್ಜೆ ಹೆಜ್ಜೆಗೂ ತನ್ನ ಅಪಾಯದ ವಿಕರಾಳ ದಂಷ್ಟ್ರಗಳನ್ನು ಮಸೆಯುತ್ತ ಎಂಬುದನ್ನು ನೆನೆದಾಗ ಮನಸ್ಸಿನ ಹರ್ಷ ಮಾಸಿಹೋಗುತ್ತದೆ; ಏನೋ ಒಂದು ರೀತಿಯ ಭಯ, ಆತಂಕ, ಕಳವಳ ಕವಿದುಕೊಳ್ಳುತ್ತದೆ......

# ಬೆಳ್ಳಿಚುಕ್ಕಿ

ತೊಟ್ಟಿಲಲ್ಲಿ ಶಿಶು, ಹತ್ತಿರದಲ್ಲೇ ಪತಿ, ಹೊರಗೆ ಪಡಸಾಲೆಯಲ್ಲಿ ಮಾವ, ಮೈದುನ ಮಲಗಿದ್ದಾರೆ. ಒಳಗೆಲ್ಲೋ ಅತ್ತೆಯ ಸುಖನಿದ್ರೆ. ಮನೆಯೆಲ್ಲ ಮೌನದ ಮಡುವಿನಲ್ಲಿ ಅದ್ದಿರುವಾಗ ಕೊಟ್ಟಿಗೆಯ ಗೂಡಿನಲ್ಲಿ ಮುಂಗೋಳಿಯ ಕೂಗು. ಹೊರಗೆ ಬೆಳ್ಳಿಚುಕ್ಕಿಯ ಮಂದ ಬೆಳಕು ಕತ್ತಲ ಮುಸುಕನ್ನು ತುಸು ಸರಿಸಿರಬೇಕು, ಪ್ರಕೃತಿಯೆಲ್ಲ ಸಚೇತನಗೊಳ್ಳುತ್ತಿದೆ. ಬನ ಬಯಲೆಲ್ಲ ಉಲ್ಲಸಿತ ವಾಗುತ್ತಿದೆ. ನೀರವ ರಾತ್ರಿಯ ನಿಗೂಢ ನಿದ್ರೆಯಿಂದ ಎಚ್ಚರಗೊಳ್ಳುವ ಲೋಕಕ್ಕೆ ದಿವ್ಯಗಾನದ ಗಾಯತ್ರಿ ಕಲ್ಲಿನ ಗರಗರ ನಾದದೊಡನೆ ತೇಲಿ ಬರು ತ್ತದೆ........ಎದ್ದಿದ್ದಾಳೆ ಮನೆಯ ಗರತಿ. ಜಗವೆಲ್ಲ ಮಲಗಿರುವಾಗ ತಾನೊ ಬ್ಬಳು ಎಚ್ಚತ್ತು ಪವಿತ್ರ ಕಾಯಕದಲ್ಲಿ ತೊಡಗಿದ್ದಾಳೆ. ಅವಳ ಬದುಕೇ ಒಂದು ಬಂಧುರ ಕಾವ್ಯ. ಬೆಳಗಿನಿಂದ ಸಂಜೆಯವರೆಗೆ ಅವಿರತವಾಗಿ ದುಡಿದು ದುಡಿದು ಹಣ್ಣಾದರೂ ದುಡಿಯುತ್ತಿದ್ದೇನೆಂಬ ಬೇಸರವಿಲ್ಲ; ದುಡಿಮೆಯಲ್ಲಿಯೇ ದೇವ ರನ್ನು ಕಾಣುವ, ಕಷ್ಟದಲ್ಲಿಯೇ ಕೈಲಾಸವನ್ನು ಕಾಣುವ, ತ್ಯಾಗಮಯಿ ಅವಳು. ಅವಳ ಜೀವನ ಶ್ರದ್ಧೆ, ಅವಳ ಕರ್ತವ್ಯನಿಷ್ಠೆ, ಅವಳ ಕಷ್ಟಸಹಿಷ್ಣುತೆ ·····ಸಂಸಾರದ ಬಂಡಿಯ ಕಡೆಗೀಲು ಅವಳು. ಅವಳ ನಡೆಯ ಮೇಲೆ, ಅವಳ ನುಡಿಯ ಮೇಲೆ, ಅವಳ ಜಾಣ್ಮೆಯ ಮೇಲೆ ನಿಂತಿದೆ ಬದುಕಿನ ಗೋಪುರ!

ಹಳ್ಳಿಯ ಹೆಣ್ಣಿನ ಹೃದಯದಲ್ಲಿ ಈ ಅನಂತ ಶಕ್ತಿಯನ್ನು ತುಂಬಿದ ಮಾಂತ್ರಿಕ ಹಸ್ತವನ್ನು ಅವಳೇ ಅರಿಯಳು. ಅವಳ ನಾಡಿನಾಡಿಯಲ್ಲಿ ತುಂಬಿ ಮಿಡಿಯುವ ಪರಂಪರಾನುಗತ ಸಂಸ್ಕೃತಿಯ ಸಿರಿಯದು. ತಾಯ ಎದೆ ಹಾಲ್ಲಿನಲ್ಲಿಯೇ ಹರಿದು ಬಂದ ಚೈತನ್ಯದ ಸೆಲೆಯದು. ಹಾಲುಣಿಸಿದ ತಾಯಿ, ನುಡಿಯನ್ನೂ ಹಾಡನ್ನೂ ಕಲಿಸಿದಳು. ಬಾಳಿ ಬದುಕುವ ದಾರಿ ಯನ್ನೂ ತೋರಿದಳು. ಇನ್ನಾವ ವಿದ್ಯಾಲಯವೂ ಅವಳಿಗೆ ಬೆಳಕನ್ನು

ನೀಡಲಿಲ್ಲ. ಮತ್ತಾವ ಗ್ರಂಥಸಮುದಾಯವೂ ಜ್ಞಾನವನ್ನು ನೀಡಲಿಲ್ಲ. ಅವಳು ಅನಕ್ಷರಸ್ಥೆ, ಅನಾಗರಿಕೆ, ಜಾಗತಿಕ ವಿಷಯಗಳಲ್ಲಿ ಕೆಲ ಮಟ್ಟಿಗೆ ಅಜ್ಞಾನಿ; ಆದರೆ ಬದುಕನ್ನು ಬಂಗಾರಮಾಡಿಕೊಳ್ಳುವಲ್ಲಿ, ಕಹಿಯಲ್ಲಿ ಸಿಹಿ ಯನ್ನು ಪಡೆಯುವುದರಲ್ಲಿ, ನೋವಿನಲ್ಲಿ ನಲವನ್ನು ಕಾಣುವುದರಲ್ಲಿ ಅವಳೇ ಸುಜ್ಞಾನಿ. ನಾಗರಿಕತೆ ಅವಳಲ್ಲಿಲ್ಲ. ಆದರೆ ಸದ್ಗುಣಗಳ ಸುಸಂಸ್ಕೃತಿಯ ಪ್ರತೀಕವೇ ತಾನಾಗಿದ್ದಾಳೆ. ದಿನದಿನವೂ ತನ್ನನ್ನು ತಿದ್ದುವ, ತನ್ನ ವ್ಯಕ್ತಿತ್ವವನ್ನು ರೂಪಿಸುವ ತನ್ನ ಭಾವನೆಯನ್ನು ಬೆಳೆಸುವ, ಪೋಷಿಸುವ ಮಹಾನಿಧಿಯೊಂದಿದೆ ಅವಳ ಅಂತರಂಗದಲ್ಲಿ. ಆ ತನಿಜೇನನ್ನು ಉಂಡೇ ಬೆಳೆದ ಚೇತನ ತನ್ನದಾಗಿ ಅದನ್ನು ಆರಾಧಿಸಿದ್ದಾಳೆ, ಅಭ್ಯಸಿಸಿದ್ದಾಳೆ. ಅದರ ಆಳ ಆಳಕ್ಕೆ ನಿತ್ಯವೂ ಇಳಿದು ಮಿಂದೇಳುತ್ತಾಳೆ. ಕಲ್ಲನ್ನು ಹಿಡಿಯುವ ಕೈ ಜಗತ್ಕಲ್ಯಾಣವನ್ನು ಕುರಿತು ಹಾಡುತ್ತದೆ, ಹಂಬಲಿಸುತ್ತದೆ.

ಕಲ್ಲಮ್ಮ ತಾಯಿ ಮೆಲ್ಲಮ್ಮ ರಾಜಃಣವ
ಜಲ್ಲಜಲ್ಲನೆ ಉದುರಮ್ಮ–ನಮ್ಮನೆಯ
ಬೆಲ್ಲದಾರುತಿಯ ಬೆಳಗೇನು

ಲೋಕವೆಲ್ಲ ನಿಂತಿರುವುದು ಆ ತನ್ನ ಕಲ್ಲಿನ ಆಧಾರದ ಮೇಲೆ. ಕಲ್ಲು ತಿರುಗಿದರೆ ತಾನು, ತನ್ನ ಮನೆ, ತನ್ನ ಸಮಸ್ತವೂ. ಲೋಕದ ಜೀವ ಶಕ್ತಿಯೇ ಆಗಿರುವ ಈ ಬೀಸುವಕಲ್ಲು ಕೇವಲ ಒಂದು ಜಡವಸ್ತುವೇ ! ಅವಳು ಲೋಕದ ತಾಯಿ, 'ಕಲ್ಲಮ್ಮ'; ಜಲ್ಲಜಲ್ಲನೆ ಅವಳು ಉದುರಿದರೆ ಸಿರಿ, ಸಂಪತ್ತು ಎಲ್ಲವೂ ವರ್ಧಿಸುತ್ತದೆ. ತಾನು ಮುಟ್ಟಿ ಬೀಸಲು ಕುಳಿತ ಆ ತಾಯಿಗೆ ಬೆಲ್ಲದಾರತಿ, ಮುತ್ತಿನಾರತಿ ಏನನ್ನು ಬೆಳಗಿದರೂ ತೃಪ್ತಿಯಿಲ್ಲ. ಅವಳು ಲಕ್ಷ್ಮಿ, ಅವಳು ಸರಸ್ವತಿ, ತನ್ನ ಅಂತರಂಗದ ರಾಗಭಾವಗಳಿಗೆ, ಆಶೆ ನಿರಾಶೆ ಗಳಿಗೆ, ಸುಖ ದುಃಖಗಳಿಗೆ ಹಾಡಿನ ರೂಪನ್ನು ಕೊಟ್ಟು 'ನಾಲಿಗ್ಗೆ ಅಕ್ಷರ ನಿಲ್ಲಿಸುವ' ದೇವಿ. ತನ್ನನ್ನು ನಲಿಸಿ, ಮನವನ್ನು ಅರಳಿಸಿ, ಬದುಕಿನಲ್ಲಿ ನಂಬಿಕೆಯನ್ನೂ, ಶ್ರದ್ಧೆಯನ್ನೂ, ನೆಚ್ಚು ಕೆಚ್ಚುಗಳನ್ನೂ ನೀಡುವ ಸಾಹಿತ್ಯ ಸುಧೆಯನ್ನು ನೀಡಿದ ಅವಳನ್ನೊಮ್ಮೆ ನೆನೆಯುತ್ತಾಳೆ ರಸ ರೋಮಾಂಚನದಲ್ಲಿ–

ತಾಯಿ ಸರಸೊತಿ ಮಲ್ಲಮ್ಮ ರಾಜುಣಪ
ಜಕ್ಕ ಜಕ್ಕನೆ ಉದುರವ್ವ—ಸಮ್ಮನೆಯ
ತೇಗಿನ ಎಳಗಾಯ ಪೊಡೆದೇನು

ಅವಳ ಚಿರಂತನ ಸ್ಫೂರ್ತಿ ಹಲವು ಹಾಡಿನ ಅಲೆಗಳನ್ನು ಚಿಮ್ಮಿದೆ. ಅವಳ ಕರುಣೆಯ ಕಣ್ಣು ತೆರೆದು, ತನ್ನ ಬದುಕಿಗೆ ಆಸರೆಯಾಗುವ, ಜೀವ ಜೀವಾಳ ವಾಗುವ, ತನ್ನ ಪಾವಿತ್ರ್ಯವನ್ನು, ಶೀಲವನ್ನು, ಬದುಕನ್ನು ಕಾಯುವ ರಕ್ಷಾಮಣಿಯಾಗುವ ವಾಣಿಯೇ ಉಕ್ಕಂದವಾಗಿ ಹರಿಯುತ್ತದೆ. ಇತರರು ಮೆಚ್ಚಲು ತಾನು ಹಾಡಿದವಳಲ್ಲ; ಇತರರನ್ನು ತಿದ್ದಲು ತಾನು ಸೊಲ್ಲೆತ್ತಿ ದವಳಲ್ಲ. ತನ್ನ ಅಂತರಂಗದ ಬೆಳಕಿಗಾಗಿ, ತನ್ನ ಆತ್ಮೋನ್ನತಿಗಾಗಿ, ತನ್ನ ಆನಂದ ಉತ್ಸಾಹಕ್ಕಾಗಿ, ತನ್ನ ಆದರ್ಶಗಳನ್ನು, ಮೌಲ್ಯಗಳನ್ನು ಕಾಯ್ದು ಕೊಳ್ಳುವುದಕ್ಕಾಗಿ.

ಅವಳ ಮನಸ್ಸೋ, ಮಲ್ಲಿಗೆಯ ಮುಗುಳು. ಆ ಮುಗುಳನ್ನು ಎಷ್ಟು ದೈವಗಳಿಗೆ ಅರ್ಪಿಸಿದರೂ ಸಾಲದು, ಎಳ್ಳು ಜೋಳಗೆಯನ್ನು ಬೆಳೆಯುವ ಭೂಮಿ ತಾಯಿ, ಸಿದ್ಧರ ಮಡದಿ ಶಿವಶರಣೆ ನೀಲಮ್ಮ, ತನ್ನ ಪತಿ, ತಾಯಿ ತಂದೆಯರು, ಅತ್ತೆಮಾವಂದಿರು, ಗುರುಹಿರಿಯರು, ಸುತ್ತೆಂಟು ದೈವಗಳೂ ಮುಂಜಾವಿನಲ್ಲಿ ಅವಳ ಮಂಜುಳವಾಣಿಯಲ್ಲಿ ಸುಳಿದು ಹೋಗಬೇಕು.

ಮುಂಚೆ ನೆನೆದೇನು ಕಂಚಿಕಾಳೇಶ್ವರಿಯ
ಚಂಚನಗಿರಿಯ ಭೈರುವನ—ಮೂಡಿಬರುವ
ಕೆಂಚ ಸೋಲಿಗನ ನೆನೆದೇನು

ಅವಳ ಬದುಕು ಒಪ್ಪವಾದರೂ ಓರಣವಲ್ಲ; ಶ್ರಮಪೂರ್ಣವಾದರೂ ಸುಖದ ನಿರೀಕ್ಷೆಯಿಲ್ಲ. ಕ್ಲೇಶ, ಕಷ್ಟ, ದಾರಿದ್ರ್ಯಗಳ ನಡುವೆಯೂ ಶಾಂತಿ ಯಿಂದ, ನೆಮ್ಮದಿಯಿಂದ, ಸಹನೆಯಿಂದ ಬದುಕುವ ಆತ್ಮಶಕ್ತಿ ತನ್ನದಾಗ ಬೇಕು. ಕಲ್ಲ ಹಿಡಿಯುವ ಕಾಯಕದ ಮೂಲಕ ಮಹಾನುಭಾವರನ್ನೆಲ್ಲಾ ನೆನೆಯಬೇಕು. ಒಂದೊಂದು ಆದರ್ಶಕ್ಕಾಗಿ, ಒಂದೊಂದು ಪವಿತ್ರ ಉದ್ದೇಶ ಕ್ಕಾಗಿ ಬದುಕಿಹೋದವರ ಸ್ಮರಣೆಗೂ ಇದು ನೆಲೆಯಾಗಬೇಕು. ಕೈಗೆ

ಕಲ್ಲನ್ನು ಹೂಡಿಕೊಟ್ಟು, ಅಂತರಂಗದ ಕೃಷಿಗೆ ಹಾದಿ ಮಾಡಿಕೊಟ್ಟ ತನ್ನಮ್ಮನಿಗೆ ತಾನು ಋಣಿ.

ಕಲ್ಲ ಕೊಟ್ಟವಮ್ಮಗೆ ಎಲ್ಲ ಭಾಗ್ಯವು ಬರಲಿ
ಪಲ್ಲಕ್ಕಿ ಮೇಲೆ ಮಗ ಬರಲಿ—ನಮ್ಮನೆಯ
ಮಲ್ಲಿಗೆ ಮುಡಿಯೊ ಸೊಸೆ ಬರಲಿ

ಆ ಹಂಬಲದಲ್ಲಿ, ಆ ಹಾರೈಕೆಯಲ್ಲಿ ಕಲ್ಲನ್ನು ನಡೆಸಿದ ತನ್ನಲ್ಲಿ ನಿರಾಶೆಯಿಲ್ಲ, ನಿರುತ್ಸಾಹವಿಲ್ಲ. ಅದೊಂದು ಪವಿತ್ರ ಕಾಯಕ, ತನ್ನ ಬದುಕಿನ ಮೂಲಮಂತ್ರ, ತನ್ನ ಸಾಧನೆಯ ಸ್ಥಿರದೀಪಸ್ತಂಭ ಎಂಬೆಲ್ಲ ಅರಿವು ಅವಳಲ್ಲಿದೆ. ಎಂತಲೇ ಮುಂಜಾವದ ಮಬ್ಬಿನಲ್ಲಿ ಎಲ್ಲರಿಗೆ ಮುನ್ನ ತಾನೆದ್ದರೂ ಅವಳಿಗೆ ಮುಜುಗರವಿಲ್ಲ, ಲವಲವಿಕೆ ತುಂಬಿತುಳುಕಿದೆ. ಕಲ್ಪನೆಯ ಎಳೆಗಳನ್ನು ನೇದು ತನ್ನದೇ ಆದ ವಿಶಿಷ್ಟ ಭಾವಪ್ರಪಂಚಕ್ಕೆ ಕರೆದೊಯ್ದಿದೆ ಅವಳ ಮುಗ್ಧ ಮನಸ್ಸು.

ಬೀಸೊ ಕಲ್ಲಿಗೆ ಹಾಸಿದೆ ಮುಂಜೆರಗ
ದೇಶದ ಮೇಲವರೆ ಏಳು ಮಂದಿ—ಅಣ್ಣದಿರು
ದೆಸೆವಂತರಾಗಿ ಬದುಕಲಿ

ಅವಳ ಪ್ರೀತಿ, ಅವಳ ಔದಾರ್ಯ ಅವಳಿಗೇ ಮೀಸಲಾದುದು. ಅವಳ ಹೃದಯ ಹದಗೊಳ್ಳಲು, ಅವಳ ಮನ ಮೃದುವಾಗಲು, ಹಲವು ದಿಕ್ಕಿನಿಂದ ಶಕ್ತಿಯನ್ನು ಹೀರುವ ಚೇತನ ತನ್ನದು. ತನ್ನ ತೌರಿನಿಂದ ತಾನು ಪಡೆದ ಋಣದ ಅರಿವು ಅವಳಿಗಿದೆ. ಎಂತಲೇ—

ಹಾಲುಂಡ ತವರಿಗೆ ಏನೆಂದು ಹಾಡಲಿ
ಹೊಳೆದಂಡೆಲಿರುವ ಕರಕೀಯ—ಕುಡಿಯಂಗೆ
ಹಬ್ಬಲಿ ಅವರ ರಸಬಳ್ಳಿ

ತನ್ನ ತಾಯಿ, ತನ್ನ ತಂದೆ, ಅಣ್ಣತಮ್ಮಂದಿರ, ಅಕ್ಕತಂಗಿಯರ ನೆನಹೇ ಒಂದು ದಿನನಿತ್ಯದ ಸ್ಫೂರ್ತಿ, ಬದುಕಿನಲ್ಲಿ ಹಲವು ಕನಸು ಕಟ್ಟುವ ಹೆಣ್ಣಿಗೆ. ತೌರು ದೂರವಿದ್ದರೇನು, ತೌರವರು ವರ್ಷಕ್ಕೊಮ್ಮೆ ಬಂದರೂ

ಏನು. ಪತಿಯೂರಿನಲ್ಲೆ ಬೆಳಗಿನ ಪ್ರಶಾಂತ ವಾತಾವರಣದಲ್ಲೇ ನಿತ್ಯವೂ ತೌರನ್ನು ಚಿತ್ರಿಸಿಕೊಂಡು ನಲಿಯುವ ಆನಂದ ಅವಳೊಬ್ಬಳದು ಮಾತ್ರ. ತಾಯಿಯನ್ನು ನೆನೆದಾಗ ಮನ ಉಬ್ಬಿಹೋಗುತ್ತದೆ. ಕಲ್ಲಮ್ಮ ತಾಯಿ ಆ ಭಾವನೆಗೆ ಪುಷ್ಟಿ ಕೊಡುವಲ್ಲಿ ಮೈಮರೆತು ಹಾಡುತ್ತಾಳೆ.

ಕಾಶಿಗೆ ಹೋಗಲಿಕೆ ಏಸೊಂದು ದಿನ ಬೇಕು
ತಾಸ್ಹೊತ್ತಿನ ಹಾದಿ ತೌರೂರು—ಮನೆಯಾಗೆ
ಕಾಶಿ ಕುಂತವಳೆ ಹಡೆದವ್ವ !

ತಾಯಿಯ ಬಗೆಗಿನ ಉದಾತ್ತವಾದ, ಬಂಧುರವಾದ, ಮನೋಜ್ಞ ಕಲ್ಪನೆಗೆ ತಾನೆ ತಲೆದೂಗಿ ಕಂಬನಿದುಂಬಳೇ ! ಆ ಹಡೆದವ್ವನ ಒಂದು ಹರಕೆಯ ಶಿಶು ತಾನು. ಅವಳ ಆತ್ಮಜ್ಯೋತಿಯ ಕುಡಿ. ಸಾಕಿ, ಸಲಹಿ ತನಗಾಗಿ ಎಷ್ಟೆಷ್ಟೋ ಕಷ್ಟ ಕಹಿಗಳನ್ನುಂಡ ಆ ತಾಯಿಯನ್ನು ಹಂಬಲಿಸುವ ತನ್ನ ಮನ ಮಣಿಯುತ್ತದೆ ಗೌರವ ಭಾವದಲ್ಲಿ.

ಬೀಸುತ್ತ ಬೀಸುತ್ತ ತೇಲುತ್ತದೆ ಅವಳ ಕಲ್ಪನೆ ಹಲವು ಪುಣ್ಯ ಚೇತನದ ಸ್ಮರಣೆಯ ದಿಕ್ಕಿನಲ್ಲಿ. ಸಿರಿವಂತ ಪಾಂಡವರು ಧರ್ಮಕ್ಕಾಗಿ, ಸತ್ಯಕ್ಕಾಗಿ, ನ್ಯಾಯಕ್ಕಾಗಿ ಬದುಕಿಹೋದವರು. ಹಲವು ಕಷ್ಟಗಳನ್ನು ಸಹಿಸಿ ನೊಂದವರು. ಸಿರಿಸಂಪತ್ತಿನ ಆಗರದಲ್ಲಿ ಸುಖಲೋಲುಪರಾಗಿರಬೇಕಿದ್ದ ಅವರು ಅದೆಂಥ ಘೋರ ವನವಾಸವನ್ನು ಕಾಣಬೇಕಾಯಿತು. ಅವರೆಲ್ಲೋ ಯಾವುದೋ ಪುರಾಣ ಪ್ರಪಂಚದಲ್ಲಿದ್ದು ಮರೆಯಾದವರಲ್ಲ. ಆ ದಿವ್ಯಮಹಿಮರು ಸದಾ ಸುತ್ತಣ ಪ್ರಕೃತಿಯಲ್ಲೇ ನಿಂತು ಲೋಕದಲ್ಲಿ ನೊಂದವರನ್ನು ಸಂತೈಸುವರೇನೊ !

ಸತ್ಯವುಳ್ಳ ಪಾಂಡವರು ಸತ್ತರು ಎನದಿರಿ
ಸತ್ತರೆ ಲೋಕ ಉಳಿಯದು—ಪಾಂಡವರು
ಬಿತ್ತಿ ಹೋಗವರೆ ಅವರೇಯ

ಸತ್ಯವಂತರಿಗೆ ಸಾವಿಲ್ಲ. ಅವರು ನಿಂತ ನೆಲೆಯುಂಟು, ಕುಳಿತ ಎಡೆಯುಂಟು. ತಂಗಿದ್ದ ಗವಿಗಳೂ ಉಂಟು. ಅಟ್ಟುಂಡ ಕುರುಹುಗಳೂ ಉಂಟು. ಆ ಪುಣ್ಯಾತ್ಮರ ಪುಣ್ಯಚರಿತೆಯನ್ನು ಉಲಿಯುತ್ತವೆ ಶಿಲೆಶಿಲೆಯೂ.

ಆಲತಿ ಕಲ್ಲಿನಲ್ಲಿ ಇದ್ದರು ಧರುಮರು
ಹಾಲು ಸಕ್ಕರೆ ನಗರೀಯು—ಹಣ್ಣ ಮೆದ್ದು
ಅವರಿದ್ದಾರಾಲತಿ ಕಲ್ಲಿನಲ್ಲಿ

ಕಡುಕಷ್ಟವನ್ನೇ ಅವರು ಕಂಡರು. ನಿರ್ಗತಿಕರಂತೆ ಕಾಡಿನ ಗಿಡಗೆಡ್ಡೆಗಳಿಂದ ಬದುಕನ್ನು ಹೊರೆದರು. ಅಡವಿಯ ಸೊಪ್ಪನ್ನು ಮಡಿಲೊಡ್ಡಿ ಕುಯ್ದು, ಕುಂತಿಯ ಪುತ್ರರೈವರೂ ಮೂಟೆ ಮೂಟೆಯಲ್ಲಿ ಹೊತ್ತರು !

ಪಾಂಡವರು ಎಂದೂ ಸುಖವನ್ನೇ ಕಂಡವರಲ್ಲ. ಹುಟ್ಟಿದಂದಿನಿಂದಲೂ ಸಾಲು ದೀವಿಗೆಯ ಸಡಗರವನ್ನೇ ಅವರು ಕಂಡವರಲ್ಲ. ಶೂರರಾದ, ಮಹಾ ಸತ್ವರಾದ ಮಕ್ಕಳನ್ನು ಹಡೆದೂ 'ಕುಂತ್ಯಮ್ಮ' ಸುಖವೆಂಬುದನ್ನು ತಾನು ಕಾಣ ದಾದಳು, ಮಕ್ಕಳ ಜೊತೆಯಲ್ಲಿ ತಾಯಿಯೂ ನೊಂದಳು, ಬೆಂದಳು, ಪರಿಪರಿಯ ಕಷ್ಟದಲ್ಲಿ ತೊಳಲಿದಳು.

ಕೊಂತ್ಯಮ್ಮ ಕೊಟ್ಟಣ ಕುಟ್ಟಿ ಭೀಮ ಭಿಕ್ಷೆಯ ಬೇಡಿ
ಅವರರುಜುನರಾಯ ಕರುಕಾದು—ಕಂಬಳಿ ಹೊದ್ದು
ಎಂಥೋರಿಗೆಂಥ ವನವಾಸ
ಎಂಥೋರಿಗೆಂಥ ವನವಾಸ ಬಂತೆಂದು
ಚಿಂತೆ ಮಾಡ್ಯಾಳೆ ಶಿವನಿಗೆ

ಪ್ರಶಾಂತ ರಾತ್ರಿಯ ಕಲ್ಲೆದೆಯೂ ಕರಗಿ ಹನಿಯುವಂತೆ, ಪಾಂಡವರ ದಾರುಣ ಜೀವನವನ್ನು ನೆನೆದಷ್ಟೂ ಕಂಬನಿದುಂಬಿ ಬರುತ್ತದೆ. ಧರ್ಮಾತ್ಮ ರಾದ ಅವರ ನೋವು, ಅವರ ಸಂಕಷ್ಟಗಳೆಲ್ಲ ಲೋಕದ ಜೀವಿಗಳಿಗೊಂದು ಆತ್ಮ ಶಕ್ತಿಯನ್ನು ಗಳಿಸಿಕೊಡಬೇಕು. ಅವರ ಕಷ್ಟವನ್ನು ನೆನೆಯುತ್ತ ನೆನೆಯುತ್ತ ತಮ್ಮ ನೋವನ್ನು ಮರೆಯಬೇಕು.

ಕುಂತಿಯ ನಿಟ್ಟುಸಿರು ಶಿವನನ್ನೂ ಮುಟ್ಟಲಿಲ್ಲ ! ಸಿರಿವಂತರು, ಗರ್ವಿಗಳು ಅವರ ಪರಿಯನ್ನು ನೋಡಿ ನಕ್ಕಾರು ! ಕಷ್ಟಪರಂಪರೆಗಳ ಸುಳಿ ಯಲ್ಲಿ ಸಿಕ್ಕರೂ ಇತರರು ಅರಿಯಬಾರದು, ಅವರ ಕಣ್ಣಲ್ಲಿ ಹಗುರವಾಗ ಬಾರದು. ಕಷ್ಟವನ್ನು ಕೊಟ್ಟು ಶಿವ ಪರೀಕ್ಷಿಸಿ ನೋಡುವನೇನೋ. ಸಹನೆ, ಸಹಿಷ್ಣುತೆಗಳೇ ಬದುಕಿನ ಊರುಗೋಲಾಗಬೇಕು.

'ಕುಂತ್ಯಮ್ಮ'ಗೆ ತಾನೇ ಹೇಳುತ್ತಾಳೆ—

ಚಿಂತ್ಯಾಕ ತಾಯೆ ಶಿವಕೊಟ್ಟ ಒಡಸ್ತನ
ಚಿಂತೆಗೆ ಮನಸು ಇಳಿದರೆ ಆಚೆಗೆ
ಸಂತೋಷದವರು ನಗುತಾರೆ
ಸಂತೋಷದವರು ನಗುತಾರೆ ತಾಯಮ್ಮ
ಸಂತೋಷವಿರಲಿ ಮನದಲ್ಲಿ

'ಧರ್ಮರ ಪದ' ಪಾಂಡವರ ಸಾಹಸವನ್ನು ಬಣ್ಣಿಸುವ ಕಥೆಯಲ್ಲ. ಅವರ ವ್ಯಥೆಯನ್ನು ಚಿತ್ರಿಸುವ ಹಾಡು. ಅವರ ಕಷ್ಟದ ವಿವಿಧ ಮುಖಗಳನ್ನು ಮನೋಜ್ಞವಾಗಿ, ಸವಿಸ್ತಾರವಾಗಿ ಬಣ್ಣಿಸುವ ಸುಂದರ ಭಾವಗೀತೆಯದು.

ಪುರಾಣ ಪ್ರಪಂಚದ ಪ್ರಸಿದ್ಧಪುರುಷರೇ ತನಗೊಂದು ಮಾದರಿಯಾಗ ಬೇಕಿಲ್ಲ, ಆ ಮುಗ್ಧೆಗೆ. ತನ್ನಂತೆಯೇ, ತನ್ನ ಸುತ್ತಮುತ್ತಣ ಸಮಾಜದಲ್ಲಿಯೇ, ಬದುಕಿಹೋದ ಅಜ್ಞಾತ ಜೀವಿಗಳೆಷ್ಟೋ ಬದುಕಿನಲ್ಲಿ ದುರ್ಭರ ಕಷ್ಟಗಳನ್ನು ಕಂಡಿದ್ದಾರೆ. ಕಷ್ಟಗಳು ಬರವೆಂದಲ್ಲ, ಬಂದ ಕಷ್ಟಗಳನ್ನು ಅವರೆಂತು ಕೊಂಡರು ಎನ್ನುವುದನ್ನು ಕಾಣುತ್ತದೆ ಇವಳ ಮನಸ್ಸು. ಅವರ ಮನಸ್ಸಿನ ಸ್ಥೈರ್ಯ, ಅವರ ತ್ಯಾಗ, ಅವರ ಬಲಿದಾನ ಇವಳಿಗೊಂದು ಮರೆಯಲಾಗದಮುದ್ರೆಯನ್ನು ಮನಸ್ಸಿನ ಮೇಲೆ ಬಿತ್ತದಿರದು. ಕಲ್ಲಮ್ಮ ತಾಯಿ ಆ ಎಲ್ಲ ಪವಿತ್ರಾತ್ಮರ ಸೊಲ್ಲನ್ನೂ ಎತ್ತಿಕೊಟ್ಟು ಮತ್ತೆ ಮತ್ತೆ ತಿದ್ದಿದ್ದಾಳೆ, ಇವಳ ರೀತಿಯನ್ನು, ಇವಳ ನೀತಿಯನ್ನು

ಅಣಜಿಯ ಹೊನ್ನಮ್ಮ, ಹುಳಿಯಾರು ಕೆಂಚಮ್ಮ, ತಮ್ಮ ಬಲಿದಾನ ದಿಂದಲೇ ದೇವತೆಗಳಾದರು ಲೋಕ ಬದುಕಲು ಕೆರೆ ಉಳಿಯಬೇಕು. ಕೆರೆ ಉಳಿಯಲು ತಾವು ಬಲಿಯಾಗಬೇಕು. ಅಳುವ ಕಂದ ತೊಟ್ಟಿಲಲ್ಲಿದ್ದರೇನು, ನಲ್ಮೆಯ ಗಂಡ ದಂಡಿಗೆ ಹೋಗಿದ್ದರೇನು, ತಾನೊಂದು ಪವಿತ್ರ ಉದ್ದೇಶಕ್ಕೆ ಆತ್ಮಾರ್ಪಣೆ ಮಾಡಿದಾಗ ಅದು ಎಂಥ ತ್ಯಾಗವಾದೀತು, ಎಂಥ ಆದರ್ಶವಾದೀತು!

ಪರೋಪಕಾರಕ್ಕಾಗಿ. ಲೋಕೋದ್ಧಾರಾರ್ಥವಾಗಿ ತನುವನ್ನರ್ಪಿಸಿ ದವರ ಮಾತಂತಿರಲಿ, ತನ್ನಂಥ ಹೆಣ್ಣು ಹಲವು ಕೌಟುಂಬಿಕ ವಿರಸಗಳಲ್ಲಿ

ತೊಳಲಿದ, ಬಳಲಿದ, ಬೆಂದ, ಬೇಸತ್ತ ಪ್ರಸಂಗಗಳೆಷ್ಟು! ಆ ಅಸಹಾಯಕ ಹೆಣ್ಣುಗಳ ಒಂದೊಂದು ನೆನಪೂ ಹೃದಯವನ್ನು ಹಿಂಡುತ್ತದೆ. ತನಗೊಂದು ಸ್ಥೈರ್ಯವನ್ನು, ತನಗೊಂದು ಬೆಳಕನ್ನು ನೀಡುತ್ತದೆ. ಉತ್ತರದೇವಿ, ಹೊನ್ನಾಲದೇವಿಯರ ಕಥೆಯನ್ನು ತಾನರಿಯಳೇ. ಅತ್ತೆಯ ಆಗ್ರಹಕ್ಕೆ ತುತ್ತಾದ ಉತ್ತರದೇವಿ ಕಂದಮ್ಮನನ್ನು ಎತ್ತಿಕೊಂಡು ಬೆಳ್ಳಿಯ ಬೆಳಕಿನಲ್ಲಿಯೇ ಗಂಡನ ಮನೆಯನ್ನು ತೊರೆದಾಗ ಕರೆದ ಕಣ್ಣೀರೆಷ್ಟು. ದಾರಿ ತೋರದೆ ಬಂದ ಮಗಳನ್ನು ಕರೆದು ಸಂತೈಸದೆ, ಬಾಗಿಲುಗಳನ್ನು ತೆರೆಯದೆ, ನಿರ್ದಯೆಯಿಂದ ತೌರವರೂ ವರ್ತಿಸಿದಾಗ ಅವಳು ಅಂತ್ಯವನ್ನು ಕಂಡ ರೀತಿ ಯಾರ ಮನಸ್ಸನ್ನು ಕಲಕದು!

ಈರೋಬಿಯ ಕಥೆಯನ್ನು ತಾನು ಹಾಡಿಕೊಂಡಾಗಲೆಲ್ಲ ಮರುಗಳೇ, ತಿಳಿಮನಸ್ಸಿನ ಈ ಗರತಿ. ಈರೋಬಿಯಂಥ ಅದೃಷ್ಟಹೀನ ಹೆಣ್ಣಾದರೂ ಯಾವುದಿದೆ ಈ ಲೋಕದಲ್ಲಿ. ತನ್ನ ಮುದ್ದು ಮಡದಿ ಗರ್ಭಿಣಿ. ಅವಳಿಗೊಂದು ಚಿನ್ನದ ಹರಿವಾಣವನ್ನು ತರಬೇಕು, ಎಂದು ಹೊರಟ ಪ್ರೀತಿಯ ನಲ್ಲ ಶೆಟ್ಟಿ ಶಂಕರರಾಯ. ಹೋದವನು ಬರಲಿಲ್ಲ. ಮುಂಗೋಳಿ ಕೂಗಿ, ಮೂಡು ಕೆಂಪೇರುವ ವೇಳೆಗೆ ಬಂದಿತೊಂದು ಘೋರ ವಾರ್ತೆ:

ಮಲಗಿದ್ದ ಹುಲಿಯನ್ನು ಕೆಣಕಿ ಶಂಕರರಾಯ ಅಸುವನ್ನು ನೀಗಿದ್ದ! ಸುದ್ದಿ ಬಂದಿತು. ರಕ್ತಸಿಕ್ತ ವಸ್ತುಗಳೂ ಬಂದುವು. ಗುರುತನ್ನು ನೋಡಿ ಈರೋಬಿ ಹೊರಟಳು ತನ್ನ ಪತಿಯ ದಾರಿಯಲ್ಲೇ! ಯಾರೂ ಅವಳನ್ನು ಉಳಿಸಲಾಗಲಿಲ್ಲ. ಹಡೆದ ತಾಯಿಯ ನುಡಿಯೂ ಅವಳ ದೃಢವಾದ ನಿಲುವನ್ನು ಕಲಕಲಿಲ್ಲ.

ತಾಯಮ್ಮ ಬಂದವಳೆ ಹಾಲನ್ನೆ ತಂದವಳೆ
ಹಾಲಿಗಿಂತ ಮೇಲೆ ಎದೆಹಾಲು—ತಕ್ಕೊಂಡು
ನಿಮ್ಮಪ್ಪ ಬಂದವಳೆ ಮೊಕ ತೋರೆ

ಈರೋಬಿ ಕದಲಲಿಲ್ಲ—

ಅಪ್ಪನಾರ ಬರಲಿ ಹಾಲನಾರ ತರಲಿ
ಹಾಲಿನಂತೇ ಬದುಕು ಅಡವೀಲಿ—ಈಡಾಡುವಾಗ
ನಮ್ಮಪ್ಪನ ಗೊಡವೆ ನನಗೇನು!

ಅವಳ ಸಂಕಟ ಹೆಚ್ಚು. ಅವಳ ಕಳವಳ ಹೆಚ್ಚು. ತನ್ನ ಸುಂದರವಾದ ಬದುಕು ಅಡವಿಯಲ್ಲಿ ಈಡಾಡಿದೆ. ಕನಸೆಲ್ಲ ಒಡೆದು ಚೂರಾಗಿದೆ ! ಅವಳಂಥ ದುಃಖಿ ಉಂಟೆ ಲೋಕದಲ್ಲಿ !

ಗೊಲ್ಲರ ನಾಗವ್ವನ ಕಥೆ ಇನ್ನೂ ಮಾರ್ಮಿಕವಾದುದು. ಮದುವೆಗೆ ಮುನ್ನವೇ ವೈಧವ್ಯವನ್ನು ಕಂಡವಳವಳು. ಎಳೆಯ ಬಾಲೆ ನಾಗವ್ವನನ್ನು ಚಿಂದಯ್ಯನಿಗೆ ಕೊಟ್ಟು ನಾಳೆಯೇ ಲಗ್ನವಾಗಬೇಕು. ಆದರೆ ಆ ರಾತ್ರಿ ಉಗುರೆಣ್ಣೆ ಮೀಯುವಾಗ ಚಿಂದಯ್ಯ ಕಾಡಿಗೆ ಹೋಗಬೇಕಾಯಿತು ಬೇಡರು ಆಡನ್ನು ಕದ್ದಿದ್ದರು. ಇತ್ತ ನಾಗವ್ವ ಬಳೆ ತೊಡುವಾಗ 'ಚೆಕ್ಕುಸೀತು', 'ಅರೆ ಬಳೆಗೆ ಲಗ್ನ ಒದಗಿದ್ದವು!' ಊಹಿಸಿದ್ದಂತೆಯೇ ಆಯಿತು. ಯಾವುದೋ ಘೋರ ದುರಂತ ನಾಗವ್ವನ ಬದುಕನ್ನು ಕಬಳಿಸಲು ಕಾದಿತ್ತು. ಕಾಡಿಗೆ ಹೋದ ಚಿಂದಯ್ಯನನ್ನು ಬೇಡರು ಮೋಸದಿಂದ ಕೊಂದರು!

ನಾಗವ್ವ ಎದೆಗುಂದಲಿಲ್ಲ ಆ ಘೋರ ವಾರ್ತೆಗೆ! ಪತಿಯ ಜೊತೆಯಲ್ಲೇ ಚಿತೆಯನ್ನೇರಲು ತೀರ್ಮಾನಿಸಿಕೊಂಡ ಅವಳ ಪರಿಗೆ ಬೆರಗಾದರು ನೆರೆದ ಮಂದಿ. ಚಿತೆ ಸಿದ್ಧವಾಯಿತು.

ಅತ್ತಿತ್ತ ನೋಡ್ಯಾಳೆ ಪತ್ಯಾಳೆ ಸತಿಕಲ್ಲ
ಹತ್ತಿರ ಒರುತಾರೆ ಅವರಪ್ಪ—ತಾಯಮ್ಮ
ಸಾವಿರ ಕೊಟ್ಟೇನು ಇರು ಮಗಳೆ !

ಸಾವಿರ ಹೊನ್ನಿನಾಸೆಗೆ ನಾಗವ್ವ ನಿಲ್ಲಲಿಲ್ಲ. ತನ್ನ ಪತಿಯ ದಾರಿ ತನ್ನದೆಂದು ಅರಿತ ಅವಳು ಮನಗೊಡಲಿಲ್ಲ ಯಾರ ಮಾತಿಗೂ—

ಸಾವಿರ ಕೊಟ್ಟರೆ ನನ್ನ ಕೊಪ್ಪಿನ ಬೆಲೆಯಿಲ್ಲ
ಅತ್ತೆಯ ಮಗನೆ ಚಿಂದಯ್ಯ (ನಾ) ಕುಟ್ಟೆ
ನಾ ಹತ್ತೋದೆ ಲೇಸು ಒಡಗಿಚ್ಚ

ಎಳೆಯ ಬಾಳೆಯ ಸುಳಿಯಂತೆ 'ಒಡಗಿಚ್ಚಿ'ನಲ್ಲಿ ಅವಳ ಬದುಕು ಕರಗಿ ಕರಗಿ ಹೋಯಿತು !

ಹೆಣ್ಣಿಗೆ ಮಣ್ಣುಬಿದ್ದೋ ಕಣ್ಣಿಗೆ ಸತ್ತೆ ಬಿದ್ದೋ
ಸಣ್ಣ ಸೀರೇ ಮೇಲೆ ಕಿಡಿಬಿದ್ದೊ—ನಾಗವ್ವನ
ಹೆಣೆಗಂಟು ನಲುಗಿ ಉರಿದ್ಹೋದೊ!

ನಾಗವ್ವನ ರುದ್ರ, ಭೀಕರ ದುರಂತ ತಲ್ಲಣವನ್ನು ತರುತ್ತದೆ ಅರೆಕ್ಷಣ. ಅವಳ ಪತಿಭಕ್ತಿ, ಅನುಪಮ ಚಿತ್ತಸ್ಥೈರ್ಯಗಳು ಯಾರನ್ನೂ ಮೂಕಗೊಳಿಸುತ್ತವೆ !

ಅತ್ತೆಗೆ ಸೊಸೆಯಾಗಿ, ಗಂಡನಿಗೆ ಮಡದಿಯಾಗಿ, ವೈದಯ್ಯನ ಅತ್ತಿಗೆಯಾಗಿ. ಎಲ್ಲದಕ್ಕಿಂತ ತುಂಬಿದ ಮನೆಯ ಸೊಸೆಯಾಗಿ ಬದುಕುವ ಹೆಣ್ಣಿನ ಕಷ್ಟ ಅಪಾರ! ಒಳಗೆ–ಹೊರಗೆ ಸದಾ ದುಡಿಯುವ ಅವಳಲ್ಲಿ ಅದೆಷ್ಟು ತಾಳ್ಮೆ, ಅದೆಷ್ಟು ಕಷ್ಟಸಹಿಷ್ಣುತೆ, ಅದೆಷ್ಟು ಮೃದುನಡೆ ತುಂಬಿ ತುಳುಕಬೇಕು. ಅವಳ ಒಂದು ತ್ಯಾಗ, ಅವಳ ಒಂದು ಶ್ರಮ, ಅವಳ ಒಂದು ಸಂಯಮವೇ ಹಳ್ಳಿಯ ಬದುಕಿನಲ್ಲಿ ಇನ್ನೂ ಉಳಿದಿರಬಹುದಾದ ಶಾಂತಿ ನೆಮ್ಮದಿಗಳಿಗೆ ಕಾರಣವೇನೋ ! ಮನೆಯ ನಂದಾದೀಪವಾಗಿ ಸದಾ ನಲವನ್ನು ಚೈತನ್ಯವನ್ನು ತುಂಬುವ ಆ ತಾಯಿಗೆ ಸದಾ ಕರುಣೆಯ ಕಣ್ಣನ್ನು ತೆರೆದವಳೇ 'ಕಲ್ಲಮ್ಮ ತಾಯಿ'. ಅಲ್ಲಿಂದಲೇ ಆ ಸಾಹಿತ್ಯದ ಉಗಮ. ಅದೇ ಬದುಕಿನ ಉಸಿರು.

# ಅಡವಿಯ ಗಿಡ

ಗುಣಗಳ ಗಣರತ್ನ ವಿಭೂ
ಷಣಮೆಸೆವುದೆ ವಿಕಳ ಹೃದಯರಾದವರ್ಗೆ

ಜನ್ನನ ಈ ಮಾತನ್ನು ಅನೇಕ ಬಾರಿ ನೆನಪು ಮಾಡಿಕೊಳ್ಳುತ್ತೇನೆ ನಮ್ಮ ಸಣ್ಣಪ್ಪನನ್ನು ಕಂಡಾಗ. ಜನ ಆ ಹಾಲಿನಂಥ ಹೃದಯವನ್ನು ಅರಿಯದು, ಆ ಅಂಬಿನಂಥ ಪ್ರತಿಭೆಯನ್ನು ಗುರುತಿಸದು. ತಾತ್ಸಾರದಿಂದ, ಉಪೇಕ್ಷೆಯಿಂದ 'ಬೂರಿಸಣ್ಣ' ಎಂದು ಜರಿಯುತ್ತಾರೆ. ಸಣ್ಣಪ್ಪ ಮಾತಿನಲ್ಲಿ ಚತುರ, ಯಾವ ಯಾವ ಮೂಲೆಗಳನ್ನೋ ಶೋಧಿಸಿ ಹೊಸ ಹೊಸ ಸುದ್ದಿಗಳನ್ನು ತಂದು ನಮ್ಮೂರ ಕಿವಿಗಳಿಗೆ ಬಿತ್ತುತ್ತಾನೆ. ಬಡವಾದ, ರಸವಿಹೀನವಾದ ಸುದ್ದಿಗಳನ್ನು ರಸೋತ್ಕಟ ಚಿತ್ರಗಳನ್ನಾಗಿ ಬಿಡಿಸುವಾಗ ಸ್ವಲ್ಪ ಬಣ್ಣ ಹೆಚ್ಚಾಗಬಹುದು. ಆದರ ಕೈಯ್ಯೋ. ಕಾಲೋ, ಮೂಗೋ, ಜುಟ್ಟೋ ತುಸು ಉದ್ದವಾಗಬಹುದು. ಅಷ್ಟರಿಂದಲೇ ಅವನ ವ್ಯಕ್ತಿತ್ವವನ್ನು ನೆಲದ ತಗ್ಗಿಗೆ ಇಳಿಸುವ ಸಾಹಸ ಮಾಡುವ ಮಂದಿ ಹೆಚ್ಚು! ತುಪ್ಪೇರಿದ ದರ್ಪಣದಲ್ಲಿ ಪ್ರತಿಬಿಂಬ ಪಜ್ಜಳಿಸಲು ಹೇಗೆ ಸಾಧ್ಯ? ನನ್ನ ದೃಷ್ಟಿಯಲ್ಲಿ ಸಣ್ಣಪ್ಪನ ಗುಣ ಕಣಿವೆಯಾಳದ ತಿಳಿಜಲ! ಬೆಟ್ಟವನ್ನೇರಿ, ಮೆಳೆಗಳನ್ನು ಬಳಸಿ, ಆಳ ಆಳಕ್ಕೆ ಇಳಿದು ಅದರ ಸವಿಯನ್ನು ಕಂಡವರು ಹತ್ತು ಬೊಗಸೆಯನ್ನು ಕುಡಿದರೂ ತೃಪ್ತಿಯಾಗರು. ಅದು ಬದಿಯಲ್ಲ, ಬಗ್ಗಡವಲ್ಲ ಎಂದು ನಾನು ಎಂದೋ ಅರಿತುಕೊಂಡೆ! ಸಣ್ಣಪ್ಪನೊಡನೆ ಸಲಿಗೆಯಿಂದ ವರ್ತಿಸುವ ನನ್ನನ್ನು ಕೆಲವರು ಕನಿಕರ ತುಂಬಿದ ದೃಷ್ಟಿಯಲ್ಲಿ ನೋಡುತ್ತಾರೆ. ನಾನೊಂದು ಬಕಪಕ್ಷಿಗೆ ಬಲಿಯಾಗುತ್ತಿದ್ದೇನೆಂದು! ಆ ತುಪ್ಪೇರಿದ ದರ್ಪಣಗಳಿಗೆ ನಾನೇನು ಮಾಡಲಿ!

ಯಸ್ಯ ನಾಸ್ತಿ ಸ್ವಯಂ ಪ್ರಜ್ಞಾ ಶಾಸ್ತ್ರಂ ತಸ್ಯ ಕರೋತಿ ಕಿಂ
ಲೋಚನಾಭ್ಯಾಂ ವಿಹೀನಸ್ಯ ದರ್ಪಣಂ ಕಿಂ ಕರಿಷ್ಯತಿ

ಸಣ್ಣಪ್ಪನನ್ನು ಅರಿತವರು ಅರ್ಥಮಾಡಿಕೊಂಡವರು, ಅವನ ಮನಸ್ಸಿನ ಎಳೆ ಎಳೆಯನ್ನು ಸೂಕ್ಷ್ಮವಾಗಿ ಪರೀಕ್ಷಿಸಿದವರು ಅವನನ್ನು ಎತ್ತರದ ಸ್ಥಾನದಲ್ಲಿ ಕೂರಿಸುತ್ತಾರೆ, ಗೌರವಿಸುತ್ತಾರೆ, ಪೂಜಿಸುತ್ತಾರೆ. ಅವನನ್ನು ಅರಿತುಕೊಳ್ಳ ಲಾಗದ ಲೋಚನ ವಿಹೀನರಿಗೆ ಕನ್ನಡಿ ಏನು ಮಾಡೀತು !

ನಮ್ಮೂರಿನ ಮಾಳಿಗೆಯ ಮನೆಯಲ್ಲಿ ಸಣ್ಣಪ್ಪ ತಪ್ಪಿ ಹುಟ್ಟಿದವನು. ಯಾವುದೋ ಬಿರುಗಾಳಿಗೆ ಸಿಕ್ಕಿ, ಹೊನಲ ದಾಡೆಗೆ ಸಿಕ್ಕಿ, ಕೊಚ್ಚಿಕೊಂಡು ಬಂದು ಬೆಂಗಾಡಿನಲ್ಲಿ ಬಿದ್ದವನು. ಕಾವೇರಿ ತೀರದ ನೀಲವಂಜಿಯ ಮರವಲ್ಲ ಅವನು. ನಮ್ಮೂರ ಹಳ್ಳದ ತಡಿಯ ತಮಾಲವೃಕ್ಷ. ಬೇಸಿಗೆಯಲ್ಲಿ ಆ ಹೊಂಗೆಯ ನೆರಳಿನ ಸವಿಯನ್ನು ನಾನೊಬ್ಬ ಮಾತ್ರ ಕಂಡುಕೊಂಡಿದ್ದೇನೆ. ಆದುದರಿಂದಲೇ ಊರಿಗೆ ಹೋದಾಗ ಸಣ್ಣಪ್ಪ ನನ್ನೊಡನೆ ಬೆಟ್ಟವನ್ನು ಹತ್ತಬೇಕು, ಗದ್ದೆಯನ್ನು ಸುತ್ತಬೇಕು. ಹತ್ತು ಹಲವು ಅನುಭವಗಳನ್ನು ಹಂಚಿಕೊಳ್ಳಬೇಕು ನಮ್ಮ ಮುರುಕು ಸೇತುವೆಯ ಮೇಲೆ ರಾತ್ರಿ ಎಷ್ಟೋ ಹೊತ್ತಿನವರೆಗೆ ನಾವು ಹರಟೆ ಕೊಚ್ಚಿದ್ದೇವೆ. ಆ ಹರಟೆ ಏಕಮುಖವಾದುದು ; ನಾನು 'ಹ್ಞೂ' ಗುಡುವವನು, ಅವನು ಹೇಳುವವನು. ಅವನ ಅನುಭವದ ಕಿನ್ನರಲೋಕವನ್ನು ಹೊಕ್ಕು ಬಂದಿರುವ ನಾನು ಅನೇಕ ಸಂದರ್ಭದಲ್ಲಿ ಮೂಕ ನಾಗಿದ್ದೇನೆ. ಹಳ್ಳಿಯ ಮುರುಕು ಮನೆಯಲ್ಲಿ, ಆ ಕಡೆಯಿಂದ ಈ ಕಡೆಗೆ, ಈ ಕಡೆಯಿಂದ ಆ ಕಡೆಗೆ ರಾಚುವ ಗಾಳಿಯ ಬಡಿತದಲ್ಲಿ ಆ ಕೈಹಣತೆ ಅಡ್ಡ ಗೋಡೆಯ ಮೇಲೆ ಉರಿಯುತ್ತಲೇ ಇದೆ. ನಮ್ಮೂರಿಗೆಲ್ಲಾ ಬೆಳಕು ಚೆಲ್ಲಿರುವ ಈ ಸೊಡರಿಗೆ ಕಾರ್ತಿಕದಲ್ಲಿ ಹುಚ್ಚೆಳ್ಳನ್ನು ಮುಡಿಸಿ ಕೈಮುಗಿಯಬೇಕು !

ಸಣ್ಣಪ್ಪನಿಗೆ ಮದುವೆಯಾದುದೆಂದೊ ನನಗೆ ತಿಳಿಯದು. ನಾವು ಚಿಕ್ಕವರಾಗಿದ್ದಾಗ ನಮ್ಮ ಎದುರು ಜಗಲಿಯಲ್ಲಿ ಕುಳಿತು ನಮ್ಮನ್ನೆಲ್ಲ ಅಣಕಿ ಸುತ್ತಿದ್ದ ನೆನಪು ಅಚ್ಚಳಿಯದಿದೆ. ಗುಂಡುದೋಪಿಗೆ ಹುಡುಗರನ್ನೆಲ್ಲಾ ಕರೆದೊಯ್ದು ಪುಟ್ಟ ಕುಕ್ಕೆಯ ತುಂಬ ನೇರಳೆಯ ಹಣ್ಣನ್ನು ಕಿತ್ತುಕೊಟ್ಟ ನೆನಪು ; ತೊಟ್ಟೋರ ಮಾವಿನ ಮರದ ಒಳ್ಳೊಳ್ಳೆಯ ಬಿಸಿಲುಗಾಯಿಗಳನ್ನು ಉದುರಿಸಿ ಹುಡುಗರಿಗೆ ಹಂಚಿಕೊಡುತ್ತಿದ್ದ ಉದಾರಿಯಾತ ! ನಮಗೆ ಈಜು ಕಲಿಸಿದವನು, ಕಣಿವೆ ಹನುಮಂತರಾಯನ ಗವಿಯನ್ನು ತೋರಿದವನು,

ಆಕ್ಕಪಕ್ಕದ ಹಳ್ಳಿಗಳ ಬಯಲಾಟಕ್ಕೆ ಕರೆದೊಯ್ಯುತ್ತಿದ್ದವನು, ಕಂಚನಹಳ್ಳಿ, ಮುದುಗೆರೆ, ಕಡಲಹಳ್ಳಿಗಳಿಗೆ ಹಬ್ಬದೂಟಕ್ಕೆ ಜೊತೆಗಾರನಾಗಿರುತ್ತಿದ್ದವನು ಸಣ್ಣಪ್ಪ ! ದೊಡ್ಡವರಿಗೆ ಪ್ರಿಯನಾದ, ಸಣ್ಣವರಿಗೆ ಗೆಳೆಯನಾದ, ಹೆಂಗಸರಿಗೆ ಬಂಧುವಾದ ಏಕೈಕ ವ್ಯಕ್ತಿ ಸಣ್ಣಪ್ಪ. ನಮಗಿಂತ ಎಷ್ಟೋ ವರ್ಷಕ್ಕೆ ಅವನು ಹಿರಿಯವನು. ನಮ್ಮ ಊರಿನ 'ಅಣ್ಣತಮ್ಮತನ'ದಲ್ಲಿ ಸಣ್ಣಪ್ಪ ನಮಗೆ 'ಚಿಕ್ಕಪ್ಪ' ಈಗಲೂ ಸಣ್ಣಪ್ಪ ಎದುರಿಗೆ ಸಿಕ್ಕರೆ "ಚೆನ್ನಾಗಿದ್ದೀರ ಚಿಕ್ಕಪ್ಪಾ" ಎನ್ನುತ್ತೇನೆ. "ಓ ನಮ್ಮ ಚೆಂದ ಹೇಳಿ. ಬದುಕಲಿಲ್ಲ ಸಾಯಲಿಲ್ಲ, ಭೂಮಿಗೆ ಹೊರೆ, ಹಿಟ್ಟಿಗೆ ದಂಡ!" ಎನ್ನುತ್ತಾನೆ. ಅವನ ಹೆಂಡತಿ ಲಕ್ಕವ್ವ ಹತ್ತಿರದಲ್ಲಿದ್ದರೇ ತಟ್ಟನೆ ಹೇಳುತ್ತಾಳೆ:

"ನೆರವುನೆ ಮುದ್ದೆ, ಮಾರಿಗುಡಿ ನಿದ್ದೆ....ಚೆನ್ನಾಗಿಲ್ದೆ ಏನಪ್ಪ ಆಗಿ ರೋದು"? ಎನ್ನುತ್ತಾಳೆ. ಆ ಮಾತಿನ ಮೊನೆ, ಅದರ ಹಿಂದೆ ಕರುಳು ಹಿಂಡುವ ಬಡತನದ ಕರಾಳ ನೃತ್ಯ, ಸಣ್ಣಪ್ಪನ ಸಂಸಾರವನ್ನು ನೆನಸಿಕೊಂಡರೆ ಒಮ್ಮೊಮ್ಮೆ ಎದೆ ಜಲ್ಲೆನ್ನುತ್ತದೆ! ಬಡತನ ಇಲ್ಲಿ ಹುಟ್ಟಿ ಲೋಕಕ್ಕೆಲ್ಲ ಹರಡಿ ತೆಂದರೂ ಸರಿಯೇ ! ಒಂದು ಕಾಲಕ್ಕೆ ಸುತ್ತಿಗೆಲ್ಲ ದೊಡ್ಡ ಕುಳವೆನಿಸಿ ಬಾಳಿ ಬದುಕಿದ ಮನೆಯದು. ಅಣ್ಣತಮ್ಮಂದಿರೆಲ್ಲ ಪಾಲಾಗಿ ಮನೆ ಆರು ಭಾಗವಾಗಿ ಹಂಚಿಹೋಯಿತು. ಮೂಡಣ ತುದಿ ಸಣ್ಣಪ್ಪನಿಗೆ ಬಂದಿತು ! ಮಳೆಯ ಹೊಡೆತಕ್ಕೆ ಗಾಳಿಯ ಹಿಡಿತಕ್ಕೆ ಸಿಕ್ಕ ಗೋಡೆ ಜರ್ಝರಿತವಾಗಿ ಒಂದು ಮುಂಗಾರಿನಲ್ಲಿ ಕುಸಿದುಹೋಯಿತು ! ತಡಿಕೆಯನ್ನು ಕಟ್ಟಿ ನೆರಳು ಮಾಡಿ ಕೊಂಡರು ! ಕೊನೆಯ ಮನೆ ! ನಾಲ್ಕು ಮಕ್ಕಳು ! ಗಂಡಹೆಂಡತಿ ! ರಾತ್ರಿಯಲ್ಲಿ ಚಳಿ, ಮಳೆಗಳ ಭಯ, ಕಳ್ಳಕಾಕರ ಭಯ, ಗಾಳಿಗೀಳಿಗಳ ಭಯ....ಆದರೂ ಸಣ್ಣಪ್ಪ ಪಿತ್ರಾರ್ಜಿತವಾದ ಮನೆಯನ್ನು ಬಿಟ್ಟಿಲ್ಲ !

ಸಣ್ಣಪ್ಪ ಬಡವ, ಲಕ್ಕವ್ವನೂ ಬಡವರ ಮಗಳೇ. ಆದರೆ 'ಒಲವೇ ಅವರ ಬದುಕು ಬಾಳು' ಎನ್ನಲು ಅನೇಕ ಬಾರಿ ಕಷ್ಟವಾಗುತ್ತದೆ. ಗಂಡ-ಹೆಂಡತಿ ನಗುನಗುತ್ತ ಮಾತಾಡಿದ್ದನ್ನು ನಮ್ಮೂರಿನ ಯಾರೂ ನೋಡಿಲ್ಲ. ಸಣ್ಣಪ್ಪ ಮಾತಾಡಲು ಪ್ರಯತ್ನಿಸಿದರೂ ಬುಸುಗುಡುತ್ತ ಲಕ್ಕವ್ವ ಮೇಲೆದ್ದು ಬಿಡುತ್ತಾಳೆ. ಸ್ವಾಭಿಮಾನಿ ಸಣ್ಣಪ್ಪನಿಗೆ ಸಿಟ್ಟು ನೆತ್ತಿಯನ್ನು ಸೀಳಿಕೊಂಡು

ಹೊರಗೆ ಚಿಮ್ಮುತ್ತದೆ. ಕೈಗೆ ಸಿಕ್ಕ ಹಿಟ್ಟಿನ ಕೋಲನ್ನೇ ಕೈಗೆತ್ತಿಕೊಂಡು ಮುಂದೆ ನುಗ್ಗುತ್ತಾನೆ; ಲಕ್ಕವ್ವನೇನೂ ಕಡಮೆಯಲ್ಲ! ಇಪ್ಪತ್ತು ವರ್ಷ ಗಂಡನ ಗರಡಿಯಲ್ಲಿ ಪಳಗಿದ ಅವಳು ಈಗೀಗ ಕಡೆಗೋಲಿಗೆ ಕೈ ಹಾಕಲು ಆರಂಭಿಸಿದ ಮೇಲೆ ಪುಟ್ಟು, ಸಟ್ಟುಗಗಳಂಥ ಮಹಾಸ್ತ್ರಗಳಿಗೆ ಕೈಹಾಕುವು ದನ್ನು ಸಣ್ಣಪ್ಪ ಬಿಟ್ಟಿದ್ದಾನೆ!

ಸಣ್ಣಪ್ಪ-ಲಕ್ಕವ್ವ ಇವರಿಬ್ಬರ ನಡುವೆ ಜಗಳದ ನಾಂದಿ ಯಾವ ಗಳಿಗೆ ಯಲ್ಲಿ ಆಗುತ್ತದೆ ಎಂದು ಹೇಳುವುದು ಕಷ್ಟ. ಅದಕ್ಕೆ ಕಾಲ ದೇಶ ಕಾರಣಗಳ ನಿರ್ಬಂಧವಾವುದೂ ಇದ್ದಂತಿಲ್ಲ. ಹತ್ತು ಜನ ಕುಳಿತಾಗ ಸಣ್ಣಪ್ಪ ಹತ್ತು ದಿಕ್ಕಿನ ಸುದ್ದಿಯನ್ನು ಬಿತ್ತತೊಡಗುತ್ತಾನೆ. ಬೆಳ್ಳೂರು ಪೇಟೆಯ ಸುದ್ದಿಯ ನ್ನೆಲ್ಲ ತನ್ನ ಹರಕುಕೋಟಿನ ಎಲ್ಲ ಜೇಬುಗಳಲ್ಲೂ ತುಂಬಿಕೊಂಡು ಬರುತ್ತಾನೆ. ಹೊತ್ತಿಗೆ ಮುಂಚೆ ಊರು ಬಿಟ್ಟು, ಅಂಗಡಿ ಮುಂಗಟ್ಟುಗಳ ಪೇಟೆಯ ಬೀದಿ ಯಲ್ಲಿ ಅಲೆದು, ಬಸ್ ಸ್ಟಾಂಡಿನಲ್ಲಿ ಕುಳಿತು, ಕಂಡವರನ್ನು ಕಾಣದವರನ್ನು ಮಾತಾಡಿಸಿ ಗಾಳಕ್ಕೆ ಹಾಕಿಕೊಳ್ಳುವ ಚಮತ್ಕಾರ, ಚಾತುರ್ಯ ಸಣ್ಣಪ್ಪನಿಗೆ ಮಾತ್ರ ಮೀಸಲು! ನಾನು ಎಂದು ಮೈಸೂರು ಕಡೆಯಿಂದ ಬಸ್ಸಿನಲ್ಲಿ ಬಂದು ಬೆಳ್ಳೂರಿನ ಬಸ್ ಸ್ಟಾಂಡಿನಲ್ಲಿ ಇಳಿದರೂ ಸಣ್ಣಪ್ಪ ನಾಣಿಯ ಹೋಟಲಿನಿಂದ ನಾಲ್ಕು ಜನರೊಡನೆ ಈಚೆಗೆ ಬರುತ್ತಾನೆ ಚೌಕದಿಂದ ಬಾಯಿ ಒರೆಸಿಕೊಳ್ಳುತ್ತ. ಕೋಲೆ ಬಸವನಂಥ ಗಂಡನನ್ನು ಲಕ್ಕವ್ವ ಗೊತ್ತಿಗೆ ಕಟ್ಟಲು ಪ್ರಯತ್ನಮಾಡಿ ವಿಫಲಳಾದಳು! ಊಟ ಹಾಕಲಿಲ್ಲ; ಮನೆಗೆ ಸೇರಿಸಲಿಲ್ಲ! ಆದರೂ ಸಣ್ಣಪ್ಪ ಜಗ್ಗಲಿಲ್ಲ. ಮಡದಿ ಮಕ್ಕಳೆಲ್ಲ ಉಂಡು ಹೊರಗೆ ಬಂದ ಮೇಲೆ ತಾನು ಒಳಗೆ ಹೋಗಿ ಮಿಕ್ಕದ್ದನ್ನು ಉಂಡು, ತೇಗಿ ಹೊರಗೆ ಬರುತ್ತಾನೆ ಕ್ಯಾಕರಿಸಿಕೊಳ್ಳುತ್ತ! ಎಂದ ಮೇಲೆ ಲಕ್ಕವ್ವನಿಗೆ ಗಂಡನೊಡನೆ ಜಗಳ ತೆಗೆಯಲು ಕಾರಣವಿನ್ನೇಕೆ ಬೇಕು! ನಾಲ್ಕು ಮಕ್ಕಳ ತಂದೆ ಸಣ್ಣಪ್ಪ ಹೆಂಡತಿಯ ಸೊಲ್ಲನ್ನು ಕೇಳಿದರೆ ಅರ್ಭಟಿಸುವ ಹಲ್ಲನ್ನು ಕಳೆದುಕೊಂಡಿದ್ದಾನೆ! ತಾನು ಆರಿನ ಮೇಲೆ ಒಂದು ದಿನ ಕೈ ಇಡಲಿಲ್ಲ! ಮಳಕನನ್ನು ಹಿಡಿದುಕೊಂಡು ಕಾವಲಿಗೆ ಹೋಗಲಿಲ್ಲ! ಮನೆಗೆ ಎಂದೂ ಒಂದು ಪಾವು ದಿನಸಿಯನ್ನು ತಂದವನಲ್ಲ! ತನ್ನ ಮನೆಯಲ್ಲಿ ತಾನೇ ಆಗಂತುಕ ಅವನು! ಹೀಗಾಗಿ ಜಗಳವಾಡುವ ನರಗಳ ಶಕ್ತಿಯನ್ನು

ಎಂದೋ ಅವನು ಕಳೆದುಕೊಂಡು ಸೊಪ್ಪಾಗಿದ್ದಾನೆ, ತನ್ನ ಹೆಂಡತಿಯು ಮುಟ್ಟಿಗೆ ಮಾತ್ರ!

ಸಣ್ಣಪ್ಪನ 'ಬಾಯಿ' ಒಂದು ಬ್ರಹ್ಮಾಸ್ತ್ರ. ಅವನೊಡನೆ ಹೆಗಲೆಣೆಯಾಗಿ ಸ್ಪರ್ಧಿಸಿ ನಿಲ್ಲುವವರು ಯಾರಿದ್ದಾರೆ! ಗಂಡಸರು ಕೆಕ್ಕರಿಸಿ ನೋಡಿದರೆ ಅವರನ್ನು ನಾಲ್ಕು ಮಾತಿನಲ್ಲಿ ಅಡಗಿಸುತ್ತಾನೆ! ಮುಗ್ಗರಿಸಿದರೆ ಮೂರಾಳ ಜೊತೆ ಏಕಾಂಗಿಯಾಗಿ ಹೋರಾಡುವ ಕೆಚ್ಚೂ ಅವನಲ್ಲಿದೆ! ಆದರೆ ಸಣ್ಣಪ್ಪನೊಡನೆ ಕಾಳಗಕ್ಕಿಳಿದವರು ತೀರ ವಿರಳ; ಅವನ ಸ್ನೇಹದ ಮಧುವಿನಲ್ಲಿ ಮಿಂದವರೇ ಹೆಚ್ಚು!

ಸಣ್ಣಪ್ಪ ಕುಳಿತ ಕಡೆ ನಿಂತ ಕಡೆ ನಾಲ್ಕು ಜನ ಸೇರುತ್ತಾರೆ; ಅವನ ಸವಿನುಡಿಗಳಿಗೆ ಬೆರಗಾಗುತ್ತಾರೆ. ಸದಾ ಕರ್ಮನಿರತರಾದ ನಮ್ಮೂರಿನವರಿಗೆ ಹೊರಗಿನ ಸಂಪರ್ಕ ಎಲ್ಲಿಂದ ಬರಬೇಕು. ತುಮಕೂರು ಮೈಸೂರು ರಸ್ತೆ ಹಾದು ಹೋಗಿದೆ; ವಿದ್ಯುದ್ದೀಪವೂ ಬಂದಿದೆ; ಒಂದೆರಡು ಮನೆಗಳಲ್ಲಿ ರೇಡಿಯೋ ಕೂಡ ಆಗಾಗ ದನಿಯೆತ್ತಿ ಹಾಡುವುದು ಕೇಳಿಬರುತ್ತದೆ! ವರ್ತಮಾನ ಪತ್ರಿಕೆ ಬಂದರೂ ಓದುವ ತಾಳ್ಮೆ, ವಿರಾಮ ಅವರಿಗಿಲ್ಲ. ಪತ್ರಿಕೆಯ ಸುದ್ದಿಗಿಂತ, ರೇಡಿಯೋವಿನ ಸುದ್ದಿಗಿಂತ ನಮ್ಮೂರಿನವರಿಗೆ ಸಣ್ಣಪ್ಪನ ಮಾತೇ ಆಕರ್ಷಕ. ಕೆಂಚಪ್ಪನ ಜಗಲಿಯಲ್ಲಿ ರಾತ್ರಿ ಎಷ್ಟೋ ಹೊತ್ತಿನವರೆಗೆ ಹುಡುಗರ ನಗು, ದೊಡ್ಡವರ ಚರ್ಚೆ, ಹೆಂಗಸರ ಮಾತು ಕೇಳಿ ಬರುತ್ತಲೇ ಇರುತ್ತದೆ. ಅಲ್ಲಿ ಸಣ್ಣಪ್ಪನ ಪಾತ್ರವೇ ಪ್ರಧಾನವಾಗಿರುತ್ತದೆ.

ಬೆಳ್ಳೂರು ಪೇಟೆಯ ಸಾಹುಕಾರರು ಪುರಸಭೆಯ ಚುನಾವಣೆಯಲ್ಲಿ ನಡೆಸಿದ ಮಸಲತ್ತು, ಕದಬಹಳ್ಳಿ ಸಂತೆಯಲ್ಲಿ ಕಾಣಿಸಿಕೊಂಡ ಗಂಟುಕಳ್ಳರು, ಬೊಮ್ಮನಹಳ್ಳಿಯ ಬಳಿಯಲ್ಲಿ ಕಮರಿಗೆ ಉರುಳಿದ ಲಾರಿ ಯಾವುದೋ ಹೊಡೆದಾಟ, ವ್ಯಾಜ್ಯ, ವ್ಯವಹಾರ ಹೀಗೆ ಸಣ್ಣಪ್ಪ ತನ್ನದೇ ಆದ ಗತ್ತಿನಲ್ಲಿ ಬಣ್ಣಿಸಲು ತೊಡಗಿದರೆ ಲಕ್ಕವ್ವನೂ ಸಿಟ್ಟನ್ನು ಮರೆತು ಬೆಪ್ಪಾಗಿ ಕೇಳುತ್ತಾಳೆ! ನಮ್ಮೂರಿಗೂ ಹೊರಪ್ರಪಂಚಕ್ಕೂ ಒಂದು ಸಜೀವ ಸಂಬಂಧವನ್ನು ಕಲ್ಪಿಸಿರುವ ವ್ಯಕ್ತಿ ಸಣ್ಣಪ್ಪ! ಅವನ ಎದುರಿನಲ್ಲಿ ಪತ್ರಿಕೆಗಳು ನಾಚುತ್ತವೆ! ರೇಡಿಯೋ ತಲೆ ತಗ್ಗಿಸುತ್ತದೆ!

ಸಣ್ಣಪ್ಪನ ವಯಸ್ಸು ಐವತ್ತನ್ನು ಎಟುಕಿಸಿಕೊಂಡಿರಬೇಕು. ಆದರೇನು ಮಡಿಪಂಚೆಯನ್ನೇ ಅವನು ಉಡುತ್ತಾನೆ! ಅವನ ಮೈಗೆ ಒಗ್ಗದ ಒಂದು ಕೋಟನ್ನು ಮಾತ್ರ ಅವನು ಊಟಕ್ಕೆ ಕುಳಿತಾಗಲೂ ಧರಿಸಲೇಬೇಕು. ಅವನು ಬರಿಗಾಲಲ್ಲಿ ನಡೆದವನಲ್ಲ! 'ಶಿಸ್ತುಗಾರನಾಗಿ ದಾಪುಗಾಲನ್ನು ಹಾಕಿಕೊಂಡು ದಿನದ ವಿಹಾರಕ್ಕೆ ಬೆಳ್ಳೂರಿನ ದಾರಿ ಹಿಡಿಯುತ್ತಾನೆ, ಹೆಂಡತಿ ಮಕ್ಕಳು ಮುಕ್ಕರಿಯನ್ನು ತೆಗೆದುಕೊಂಡು ಮಣ್ಣು ಹೊರಲು ಹೊರಟರೆ!

ಸಣ್ಣಪ್ಪ ಎಂದೂ ಒಂದು ಕಾಸನ್ನು ದುಡಿದವನಲ್ಲ. ಆದರೆ ಅವನ ಜೇಬು ಎಂದೂ ಬರಿದಾದುದಿಲ್ಲ. ಬೀಡಿ, ಬೆಂಕಿಪೊಟ್ಟಣಗಳಿಗೇನು, ಮಕ್ಕಳಿಗೆ ಹೂವು, ಉಪ್ಪುಕಡಲೆಗಳನ್ನು ತೆಗೆದುಕೊಂಡು ಹೋಗಲೂ ಅವನಿಗೇನೂ ಕೊರತೆ ಕಾಣದು. ಹೊರಗಿನವರು ಬಂದರೆ ಮಾರ್ಗದರ್ಶಿಯಾಗುತ್ತಾನೆ ನಮ್ಮ ಚುಂಚನಗಿರಿಗೆ. ಪರಿಚಿತರು ಕಂಡರೆ ಹಿತವಾಗಿ ಮಾತಾಡಿ ಮೋಡಿಯನ್ನು ಹಾಕುತ್ತಾನೆ.

ಸಣ್ಣಪ್ಪನ ಸಾಹಸಗಳ ಬಣ್ಣನೆಗೆ ತೊಡಗಿದರೆ ಅಪಾರ ಘಟನೆಗಳ ದೊಡ್ಡ ಪಟ್ಟಿಯನ್ನೇ ಅರ್ಪಿಸಬೇಕಾಗುತ್ತದೆ. ದುಡಿಮೆಯಲ್ಲಿ ಹೆಂಡತಿ ಮಕ್ಕಳ ಯೋಗಕ್ಷೇಮದಲ್ಲಿ ಸಣ್ಣಪ್ಪ ಅಷ್ಟೇನೂ ಆಸಕ್ತಿ ತೋರುವುದಿಲ್ಲ ನಿಜ. ಆದರೆ ಸ್ವಾಭಿಮಾನದ ಪ್ರಶ್ನೆ ಬಂದಾಗ ಅವನ ಸಿಟ್ಟಿನ ಆಸ್ಫೋಟವನ್ನು ನೋಡಬೇಕು. ಯಾವುದೋ ಜಮೀನು ಒತ್ತುವರಿಗೆ ಸಂಬಂಧಿಸಿದಂತೆ ವ್ಯಾಜ್ಯವೊಂದರಲ್ಲಿ ಸಣ್ಣಪ್ಪನ ಸಂಸಾರ ಧುಮುಕಬೇಕಾಗಿ ಬಂದಿತು. ನೆರೆಮನೆಯ ನಂಜಯ್ಯ ಏನೋ ಚುಚ್ಚುನುಡಿಯನ್ನಾಡಿದನೆಂದು ಕೆಲವು ದಿನಗಳ ಹಿಂದೆ ಇದ್ದಕ್ಕಿದಂತೆಯೇ ಪುಟ್ಟ ಕುರುಕ್ಷೇತ್ರವೊಂದು ನಡೆದುಹೋಯಿತು ನಮ್ಮೂರಿನಲ್ಲಿ. ಹೊಡೆದಾಟ ಗುದ್ದಾಟಗಳು ಬಂದಾಗ ಸಣ್ಣಪ್ಪನ ಸಂಸಾರದ ಒಡಕುಗಳೆಲ್ಲ ಮುಚ್ಚಿಹೋಗುತ್ತವೆ. ಮನೆಮಂದಿಯೆಲ್ಲ ಒಂದು ಕೈಯಾಗಿ ಎದುರಾಳಿಗಳ ಮೇಲೆ ಏರಿ ಬರುತ್ತಾರೆ. ಅವರ ಬಾಯಿಂದ ಚಿಮ್ಮುವ ಸಿಡಿಲ ನುಡಿಗಳು ಹತ್ತಿರ ಹಾರಿ, ಆರ್ಭಟಿಸಿ, ಹೊಡೆಯಲು ಹೋಗಿ, ಕೆಳಗುರುಳಿ ಹಣ್ಣಾಗುವ ಅಪಾಯದ ಮುಷ್ಟಿಗಳು ಒಂದಲ್ಲ, ಹಲವು. ಸಣ್ಣಪ್ಪ ನಂಜಯ್ಯನತ್ತ ಕೂಗಿ, ಕುಪ್ಪಳಿಸಿ ನುಗ್ಗಿದ. ಅವನ ಹಿಂದೆಯೇ ಮನೆಯ ಸೈನ್ಯವೂ ಮುತ್ತಿಗೆ ಹಾಕಿತು. ಪುಟ್ಟ ಜಗಲಿಯೊಂದರ ಮೇಲೆ ನಂಜಯ್ಯ-ಸಣ್ಣಯ್ಯ

ತೆಕ್ಕೆಮುರಿ ಬಿದ್ದರು. ಊರ ಜನವೆಲ್ಲ ಸೇರಿತು. ಕೆಲವರು ಜಗಲಿಗೆ ಹಾರಿ ಆ ಕಟ್ವಾಳುಗಳನ್ನು ಬಿಡಿಸುವ ಸಾಹಸಕ್ಕೆ ತೊಡಗಿದರು. ನೂಕುನುಗ್ಗಲು, ತುಳಿತ, ಎಳೆತಗಳ ಗೊಂದಲದಲ್ಲಿ ಏನಾಯಿತೊ ! ಸಣ್ಣಪ್ಪ ಧಡಾರನೆ ಸೊಂಟದುದ್ದ ಜಗಲಿಯಿಂದ ಕೆಳಗೆ ಉರುಳಿದ. ತಲೆ ಕಲ್ಲೊಂದಕ್ಕೆ ಬಡಿಯಿತು. ಜನ 'ಹೋ' ಎಂದರು. ಅವನ ಹೆಂಡತಿ ಮಕ್ಕಳು 'ಕೆಟ್ಟೆವು' ಎಂದು ಬೊಬ್ಬೆಹಾಕಿದರು. ಕ್ಷಣಮಾತ್ರದಲ್ಲಿ ಸಣ್ಣಪ್ಪ ದುರ್ಯೋಧನ ಗದಾ ಘಾತಕ್ಕೆ ತುತ್ತಾದ ಭೀಮನಾಗಿ ಕೆಳಗೆ ಉರುಳಿದ್ದ.

ಅರಿಗಿಂಬಾಯ್ತುಟಿವಾದುದು
ಮರುತ್ಸುತಂಗರ್ಜುನಾದಿಗಳ್ ಮುಳಿದರ್ ಮೂ
ವರುಮೆನ್ನ ನನ್ನಿಗೀಗಳೆ
ಪರಿಭವಮಾಯ್ತೆಂದು ಧರ್ಮಜಂ ಚಿಂತಿಸಿದಂ

ಆ ಪ್ರಸ್ತಾವದಲ್ಲಿ ಧಾತುನಿರ್ಜರ ಗಿರಿ ಕೆಡವಂತೆ ಕೆಡೆದಿದ್ದ ಸಣ್ಣಪ್ಪನನ್ನು ನೋಡಿದರು ಜನ; ಅವನಾಗಲೇ ಮೂರ್ಛಾಗತನಾಗಿದ್ದನು ! ಊರ ಗೌಡರು ತಮ್ಮ ಊರಿನಲ್ಲಿ ಭೀಕರ ಕೊಲೆಯೊಂದು ನಡೆದುಹೋಯಿತೆಂದು ಕುಸಿದುಕುಳಿತರು. ನಂಜಯ್ಯನ ಮೇಲೆ ಊರಮಂದಿ ತೋಳು ಮಸೆದರು. ಜಗಳವನ್ನು ಬಿಡಿಸಲು ಬಂದ ಕೆಳಮನೆ ರಾಮಣ್ಣ ಸಣ್ಣಪ್ಪನನ್ನು ಇತ್ತ ಎಳೆದುಕೊಳ್ಳುವ ರಭಸದಲ್ಲಿ ಅವನನ್ನು ಜಗಲಿಯ ಕೆಳಕ್ಕೆ ಕುಕ್ಕಿದ್ದ ! ನಂಜಯ್ಯ ಜಗಲಿಯಿಂದ ತಳ್ಳಿಬಿಟ್ಟನೆಂದು ಅವನೇ ಹಾರಿ ಅಬ್ಬರಿಸಿದ ! ಬೆಪ್ಪಾದ ನಂಜಯ್ಯ ಓಡಿಹೋಗಿ ಮನೆಯ ಬಾಗಿಲು ಹಾಕಿಕೊಂಡ !

ಸಣ್ಣಯ್ಯನ ಶೈತ್ಯೋಪಚಾರಕ್ಕೆ ಗೌಡರೇ ಧಾವಿಸಿ ಬಂದರು. ಲಕ್ಕವ್ವನ ಪತಿಪ್ರೇಮ ಊರ ಮಂದಿ ಬೆರಗಾಗುವಂತೆ ಹೊರಸಿಡಿಯಿತು. ಗಂಡನಲ್ಲಿ ಮೆಣಸಿನಷ್ಟು ಪ್ರೀತಿಯಿಲ್ಲವೆಂದಿದ್ದವರೆಲ್ಲ ತಲೆ ತಗ್ಗಿಸುವಂತೆ ಲಕ್ಕವ್ವ ಬಿದ್ದು ಬಸವಳಿದು ಅತ್ತಳು. ತಾಯಿಯ ಜೊತೆ ಸೇರಿ ತಂದೆಯನ್ನು ಹಿಗ್ಗಾಮುಗ್ಗ ಎಳೆದಾಡುತ್ತಿದ್ದ ಮಕ್ಕಳೂ ಅಪ್ಪನ ಕಾಲ ಮೇಲೆ ಬಿದ್ದು ಅಳತೊಡಗಿದವು ! ಜನರ ಕಣ್ಣಂಚಿನಲ್ಲಿಯೂ ನೀರಾಡಿತು ! ಗಾಡಿ ಕಟ್ಟಿಕೊಂಡು

ಬೆಳ್ಳೂರು ಆಸ್ಪತ್ರೆಗೆ ಸಾಗಿಸಿದರು ! ಹೇಗೋ ಸಣ್ಣಪ್ಪ ಉಸಿರಾಡಿಕೊಂಡ !

ಗೌಡರು ಕಣ್ಣಾರೆ ಕಂಡ ದೃಶ್ಯಕ್ಕೆ ಪರಿಹಾರವನ್ನು ಕೊಡಿಸಿದರು.

ಸಣ್ಣಪ್ಪನ ತಲೆಯ ಬಿಳಿ ಕವಚದ ಪಟ್ಟಿ ಅವನ ಮುಡಿಗೊಂದು ಅಲಂಕಾರವಾಗಿಯೇ ಪರಿಣಮಿಸಿತು. ನಾಲ್ಕು ಜನ ಕಲೆತ ಕಡೆ ಸಣ್ಣಪ್ಪ ತಲೆಯನ್ನು ಮುಂದೆ ಚಾಚಿಕೊಂಡು ನಿಲ್ಲುತ್ತಿದ್ದ. ಅನಂತರ ಬಾಯಲ್ಲಿ ನಾಲು ಮರುಕದ ಮಾತು ಆಡಿದರೆ ಅವನಿಗೆಷ್ಟೋ ನೆಮ್ಮದಿ !

ಗೌಡರಿಗೂ ಸಣ್ಣಪ್ಪನಿಗೆ ವಿಶ್ವಾಸ ಹೆಚ್ಚು. ಚಿಕ್ಕಂದಿನಲ್ಲಿ ಗೋಲಿ ಗಜ್ಜುಗ ಆಡಿದ ಹಳೆಯ ಗೆಳೆತನ ಅವರದು. ಜೊತೆಯಲ್ಲಿ ಕೂಡಿ, ಆಡಿ ಬೆಳೆದ ಅವರು, ಜೊತೆಯಲ್ಲಿಯೇ ಮಠಕ್ಕೂ ಹೋದವರು ! ಗೌಡರು ಕಲಿತದ್ದನ್ನು ಮರೆತಿದ್ದರೂ ಸಣ್ಣಪ್ಪ ಮರೆತಿರಲಿಲ್ಲ. ಜೈಮಿನಿ ಭಾರತಕ್ಕೆ ಅರ್ಥ ಹೇಳುವ, ಎಷ್ಟೋ ಪದ್ಯಗಳನ್ನು ನಿರರ್ಗಳವಾಗಿ ಒಪ್ಪಿಸುವ, ಅಮರಕೋಶದ ಪಾದಗಳನ್ನು ಎಡಹದೆ ಪಟಪಟನೆ ಹೇಳಿಬಿಡುವ ಅವನನ್ನು ಕಂಡಾಗ ನಮ್ಮೂರ ಕಾಲೇಜು ಹುಡುಗರೂ ಹಿಂದೆ ಸರಿಯುತ್ತಿದ್ದರು ! ಯಾವುದೋ ತಾತನ ಕಾಲದ ಪತ್ರವೊಂದನ್ನು ಒಡ್ಡಿ “ಎಲ್ಲಿ ಕಾಲೇಜಿನಲ್ಲಿ ಓದೋರು ಈ ಪತ್ರ ಓದಿ'' ಎಂದು ಸವಾಲನ್ನು ಹಾಕಿ, ಅವರ ವಿದ್ಯಾಗೋಪುರ ಕುಸಿಯುವಂತೆ ಮಾಡುವ ವಿನೋದ ಪ್ರಿಯ.

ಸಣ್ಣಪ್ಪನ ಜ್ಞಾನ ಭಂಡಾರ ದೊಡ್ಡದು. ಅವನ ಅನುಭವ ದಟ್ಟವಾದುದು. ಚಂದ್ರಲೋಕಯಾನದಂಥ ಆಗತಾನೆ ಕಮ್ಮಗೆ ಹುರಿದ ಹುರುಳಿಯಂಥ ವಿಷಯಗಳೆಷ್ಟನ್ನೋ ಅವನು ಬಲ್ಲನು. ಪುರಾಣ ಪ್ರಪಂಚದ ಮೂಲೆ ಮೂಲೆಗಳನ್ನೂ ಶೋಧಿಸಿದವನು. ಬೇಸಾಯ ಮಾಡಿದ ಕೈ ಅವನದಲ್ಲವಾದರೂ ಆ ಸಂಬಂಧವಾದ ವಿಷಯಗಳಲ್ಲಿ ದೊಡ್ಡ ವಿಜ್ಞಾನಿ ಅವನು. ಮಳೆಯ ನಕ್ಷತ್ರ, ಬಿತ್ತುವ ಕಾಲ, ವ್ಯವಸಾಯ ಕ್ರಮ, ಯಾವ ಮಣ್ಣಿಗೆ ಯಾವ ಬೆಳೆ, ರಾಸುಗಳ ಲಕ್ಷಣ, ಸುಳಿಗಳ ಸಮಸ್ಯೆ, ಪಶುವೈದ್ಯಗಳಲ್ಲಿ ಅವನು ನಿಪುಣ. ಆಧುನಿಕ ವ್ಯವಸಾಯ ಪದ್ಧತಿಗಳನ್ನು ಅವನು ಎಂದೂ ಒಪ್ಪನು. ಪರಂಪರಾನುಗತವಾಗಿ ಬಂದ ಬೆಳೆಯ ಕ್ರಮ, ಅದರ ಪ್ರಯೋಜನಗಳ ಬಗ್ಗೆ ನಮ್ಮೂರಿನವರು ಕಟ್ಟು ಬೀಳುವಂತೆ ಬಲವಾದ ಕೋಟೆಯಾಗಿದ್ದಾನೆ ಸಣ್ಣಪ್ಪ. ಆದರೂ

ಈಚೆಗೆ ಒಬ್ಬಿಬ್ಬರು ಹೊಸಕ್ರಮಗಳನ್ನು ಅನುಸರಿಸಿ ಹೆಚ್ಚು ದಿನಸಿಯನ್ನು ಕಣಜಕ್ಕೆ ತುಂಬಿಕೊಂಡ ಮೇಲೆ ಸಣ್ಣಪ್ಪ ಈ ಕಡೆಯೂ ಸ್ವಲ್ಪ ರಿಯಾಯಿತಿಯನ್ನು ತೋರುವ ಔದಾರ್ಯವನ್ನು ತಾಳಿದ್ದಾನೆ.

ಯಾವ ಜಾತ್ರೆ ಸಂತೆಗಳನ್ನೂ ಬಿಡದೆ ಸುತ್ತುವ ಸಣ್ಣಪ್ಪ ಕಾಲು ನಡಗೆಯಲ್ಲಿ ಎಂದೂ ಹೋದವನಲ್ಲ. ನವರಾತ್ರಿಯ ಕಾಲದಲ್ಲಿ ಬಸ್ ಕಂಡಕ್ಟರನನ್ನು ಪುಸಲಾಯಿಸಿ ಮೈಸೂರಿಗೂ ಬರಿಗೈಯಲ್ಲಿ ಬಂದು ಬಿಡುತ್ತಾನೆ. ಉಳಿದ ಹತ್ತಿರದ ಸ್ಥಳಗಳಿಗೆ ಗೌಡರ ಗಾಡಿ ಅವನಿಗೆ ಮೀಸಲು. ಅವನ ಮಾತಿನ ವೈಖರಿಗೆ ಮನಸೋತ ಗೌಡರು ಎಲ್ಲಿ ಹೋದರೂ ಅವನನ್ನು ಜೊತೆಯಲ್ಲಿ ಕರೆದೊಯ್ಯುತ್ತಾರೆ. ದೂರದ ಊರುಗಳಿಗೆ ಹೋದರಂತೂ ಸಣ್ಣಪ್ಪನ ಜೊತೆ ಅವರಿಗೆ ಬುತ್ತಿಯಷ್ಟೇ ಅಗತ್ಯ. ಅಂಥ ಪ್ರವಾಸ ಕಾಲದಲ್ಲಿ ಸಣ್ಣಪ್ಪ ಅನೇಕ ಸಾಹಸಗಳನ್ನು ಮೆರೆದುದುಂಟು, ಚಾತುರ್ಯವನ್ನು ತೋರಿದುದುಂಟು. ಕಳೆದ ವರ್ಷ ಬೆಳ್ಳೂರು ಗಾಡಿಯವರಿಗೆ ಅವನು ಬುದ್ಧಿ ಕಲಿಸಿದ ಪ್ರಸಂಗವನ್ನು ನಮ್ಮೂರಿನವರು ಇನ್ನೂ ನೆನೆದುಕೊಳ್ಳುತ್ತಾರೆ.

ಮಾಯಸಂದ್ರಕ್ಕೆ ಕಾರ್ಯಾರ್ಥವಾಗಿ ಹೋಗಿದ್ದ ಗೌಡರು ಸಣ್ಣಪ್ಪನನ್ನೂ ಜೊತೆಯಲ್ಲಿ ಕರೆದೊಯ್ದಿದ್ದರು. ಊರಿನ ಇನ್ನೂ ಐದಾರು ಮಂದಿ ಗಣ್ಯರು ಗಾಡಿಯಲ್ಲಿದ್ದರು. ಮಾದೇಶ್ವರ ಗುಡ್ಡದ ಬಳಿಗೆ ಬರುವ ವೇಳೆಗೆ ಕತ್ತಲಾಗಿ ಹೋಯಿತು. ಬೇಗ ಬೇಗ ಊರು ಸೇರಿಕೊಳ್ಳಲು ಗಾಡಿಯನ್ನು ಓಡಿಸಿಕೊಂಡು ಬರುತ್ತಿದ್ದ ಅವರಿಗೆ ಮಾಯಸಂದ್ರದ ಸಂತೆಗೆ ಹೋಗಿದ್ದ ಎಂಟು ಗಾಡಿಗಳವರು ದಾರಿ ಬಿಡಲಿಲ್ಲ. ಸಣ್ಣಪ್ಪನೇ ಗಾಡಿ ಹೊಡೆಯಲು ಕುಳಿತು ಪಕ್ಕದಲ್ಲಿ ಜಾಗಮಾಡಿಕೊಂಡು ಹೋಗಲು ಪ್ರಯತ್ನಿಸಿದ. ಸ್ಥಳ ದೊರೆಯಲಿಲ್ಲ. ಬೆಳ್ಳೂರ ಬಣಜಿಗರು ಇವರನ್ನು ಅಣಕಿಸುತ್ತ, ಚುಚ್ಚಿ ಮಾತನಾಡುತ್ತ ತಮ್ಮ ಗಾಡಿಯನ್ನು ಇವರ ಗಾಡಿಗೆ ಅಡ್ಡ ತರುತ್ತ ಕೇಕೆ ಹಾಕಿದರು. ಸಣ್ಣಪ್ಪನ ತಾಳ್ಮೆ ಎಲ್ಲೆ ಮೀರಿತು. "ನಿಧಾನವಾಗಿಯೇ ಹೋಗಲಿ, ಮುಳುಗಿ ಹೋಗಿದ್ದೇನು !" ಎಂದು ಗೌಡರು ಎಷ್ಟು ಹೇಳಿದರೂ ಅವನು ಕೇಳಲಿಲ್ಲ. ಎಡಗೋಲಿನ ಬಾಲವನ್ನು ಮುರಿದು, ಬಾರುಕೋಲಿನಿಂದ ಎರಡು ಎತ್ತುಗಳಿಗೂ ಚಟೀರ್ ಎಂದು ಬಾರಿಸಿ ಗಾಡಿಯನ್ನು ಎಡಬದಿಯಲ್ಲಿ ನುಗ್ಗಿಸಲು ಪ್ರಯತ್ನಿಸಿದ. ಮುಂದಿನ ಗಾಡಿಯವನು ಜಾಗ

ಕೊಡಲಿಲ್ಲ ; 'ಬಿಡಬೇಡ...ಬಿಡಬೇಡ' ಎಂದು ಉಳಿದ ಗಾಡಿಯವರು ಹುರು ದುಂಬಿಸಿದರು. ಸಣ್ಣಪ್ಪ ಬುಸುಗುಡುತ್ತ ಅಷ್ಟು ದೂರ ಜೊತೆಜೊತೆಯಲ್ಲೆ ಗಾಡಿಯನ್ನು ಓಡಿಸಿದ. ಸಾಧ್ಯವಾಗಲಿಲ್ಲ. ಜಲ್ಲಿಯ ಗುಡ್ಡೆ, ಗುಂಡಿ, ಗೊಟಾರಗಳು ಅಡ್ಡಿ ಬಂದವು ಗೌಡರ ಗಾಡಿಗೆ! ಸಿಟ್ಟಿಗೆದ್ದ ಸಣ್ಣಪ್ಪ ಗಾಡಿ ಯಲ್ಲೇ ಎದ್ದುನಿಂತು ಪಕ್ಕದ ಗಾಡಿಯವನಿಗೆ ಏನನ್ನೋ ಅಂದಿರಬೇಕು, ಆ ಗಾಡಿಯವನು ಪ್ರತಿಭಟಿಸಿ ತನ್ನ ಬಾರುಕೋಲಿನಿಂದ ಇವನಿಗೆ ತಿವಿದು ಬಿಟ್ಟ! ಸಣ್ಣಪ್ಪನ ಬಲಗೈಗೆ ಚೆನ್ನಾಗಿಯೇ ನೋವಾಯಿತು! ಒಂದು ಗಳಿಗೆ ಗಾಡಿಯನ್ನು ನಿಲ್ಲಿಸಿಕೊಂಡ ! ನೇರವಾಗಿ ಪಕ್ಕದ ಗಾಡಿಗೆ ಹಾರಿ ಅವನನು ಹಿಡಿಯಲು ಧೈರ್ಯ ಬರಲಿಲ್ಲ ಅವನಿಗೆ, ಹತ್ತುಗಾಡಿಗಳಿಂದ ಇಪ್ಪತ್ತಕ್ಕೂ ಹೆಚ್ಚು ಜನರಿದ್ದಾರೆ ಅವರು !

ಗಾಡಿ ಹೊಡೆಯಲು ಯಾರನ್ನೋ ಕೂರಿಸಿ ಸಣ್ಣಪ್ಪ ತಾನು ಕೆಳಗೆ ಹಾರಿದ. ಗೌಡರು ಕೂಗಿದರು ಇನ್ನೆಲ್ಲಿ ಅವರೊಡನೆ ಹೊಡೆದಾಟಕ್ಕೆ ಹೋಗ ಬಿಡುತ್ತಾನೊ ಎಂದು. ಸಣ್ಣಪ್ಪ "ಬಂದೆ ಬಂದೆ" ಎಂದು ಕತ್ತಲಲ್ಲಿ ಕರಗ ಹೋದ. ಹೊಲಮಾಳವನ್ನು ಹಾದು, ನಮ್ಮೂರ ಹಳ್ಳವನ್ನು ದಾಟ ಊರಿಗೆ ಒಂದೇ ಉಸಿರಿನಲ್ಲಿ ಓಡಿಬಂದ. ಗಾಡಿಗಳು ಎಷ್ಟೋ ಹಿಂದೆ ಬಿದ್ದವು. ಸೇತುವೆಯನ್ನು ಹಾದು ನಮ್ಮೂರಿನ ಮೂಲಕವೇ ಅವು ಬೆಳ್ಳೂರಿಗೆ ಹೋಗ ಬೇಕು ; ಅವಿನ್ನೂ ಅರ್ಧಮೈಲಿಯ ಆಚೆಗೆ ಉಳಿದವು.

"ಬೆಳ್ಳೂರು ಬಣಜಿಗರು ಗೌಡರನ್ನು ಹೊಡೆದು ಬಿಟ್ಟರು....ಹೊಡೆದು ಬಿಟ್ಟರು !"

ಸಣ್ಣಪ್ಪನ ಕೂಗು ಊರಿನವರನ್ನೆಲ್ಲ ಬಡಿದೆಬ್ಬಿಸಿತು! ಕೈಗೆ ಸಿಕ್ಕ ದೊಣ್ಣೆಗಳನ್ನು ಎತ್ತಿಕೊಂಡು ಜನವೆಲ್ಲ ಓಡಿಬಂದರು. ಸಣ್ಣಪ್ಪ ದಂಡನ್ನು ನಡಸುತ್ತ ಸೇತುವೆ ಬಳಿಗೆ ಬಂದ; ಗಾಡಿಗಳು ಇನ್ನೂ ಅಷ್ಟು ದೂರದಲ್ಲಿ ಬರುತ್ತಿದ್ದವು. ಸೇತುವೆಯ ಎರಡು ಕಡೆಗಳಲ್ಲೂ ಜನ ಅಡಗಿ ಕುಳಿತರು.

ಅಮಾವಾಸ್ಯೆಯ ಹಿಂದಿನ ಕತ್ತಲು. ಶಬ್ದಮಾತ್ರದಿಂದ ಗಾಡಿಗಳು ಬರುತ್ತಿವೆಯೆಂದು ಗುರುತಿಸಲು ಸಾಧ್ಯವಾಗುತ್ತಿತ್ತು. ಗಾಡಿಗಳು ಇನ್ನೇನು ಸೇತುವೆಯ ಇಕ್ಕಟ್ಟಾದ ಭಾಗವನ್ನು ಪ್ರವೇಶಿಸಿರಬಹುದು, ಸಣ್ಣಪ್ಪನ ದಂಡು ಎರಡು ಕಡೆಗಳಿಂದಲೂ 'ಹೋ' ಎಂದು ದೊಣ್ಣೆಗಳನ್ನು ಬೀಸುತ್ತ ಮುತ್ತಿಗೆ

ಹಾಕಿತು ! ಪರಿಸ್ಥಿತಿಯ ಅಪಾಯವನ್ನು ಬಣಜಿಗರು ಕಂಡುಕೊಂಡರು. ಗಾಡಿಗಳನ್ನು ಬಿಟ್ಟು ಕತ್ತಲಲ್ಲಿ ಕೈಗೆ ಸಿಕ್ಕದಂತೆ ದಿಕ್ಕುದಿಕ್ಕಿಗೆ ಓಡಿದರು. ಊರಿನವರಾರು, ಗಾಡಿಯವರಾರು ಎಂದು ಕತ್ತಲಲ್ಲಿ ಗುರುತಿಸುವುದು ಕಷ್ಟವಾಯಿತು. ದೊಣ್ಣೆಯ ಏಟುಗಳು ಅವರವರಲ್ಲಿಯೇ ವಿನಿಮಯವಾಗತೊಡಗಿದವು! ಸಣ್ಣಪ್ಪ ಗುಂಪಿನಿಂದ ನುಸುಳಿಕೊಂಡು ಜಲ್ಲಿಗುಡ್ಡೆಯ ಮೇಲೆ ನಿಂತು 'ಹೊಡೆಯಿರಿ, ಹೊಡೆಯಿರಿ' ಎಂದು ಕೂಗಿಹೇಳುತ್ತ ದೊಣ್ಣೆಯ ಹೊಡೆತದಿಂದ ಪಾರಾದ.

ಗೌಡರ ಗಾಡಿ ಹತ್ತು ಗಜ ಆಚೆಗೆ ನಿಂತಿತ್ತು. ಕ್ಷಣಕಾಲ ಅವರಿಗೂ ದಿಗ್ಭ್ರಮೆಯಾಗಿ ಗಾಡಿಯಿಂದ ಕೆಳಗಿಳಿಯಲಿಲ್ಲ. ಗುಂಪಿನಲ್ಲಿ ಯಾರೋ "ಇಲ್ಲೊಂದು ಗಾಡಿ ...ಓಡುಬಲ್ಲಿ...ಓಡುಬಲ್ಲಿ....! ಎಂದು ಕೂಗಿಕೊಂಡರು. ಜನರೆಲ್ಲ ಅತ್ತ ನುಗ್ಗಿದರು! ಗೊಂದಲದಲ್ಲಿ ಸಣ್ಣಪ್ಪನ ಎಚ್ಚರಿಕೆಯ ನುಡಿ ಕೇಳಲಿಲ್ಲ! ಗೌಡರು, ಅವರ ಜೊತೆಯವರು "ನಾವು ಕಣ್ರೊ ನಾವು ಕಣ್ರೊ!" ಎನ್ನುವ ನುಡಿಯೂ ಎತ್ತಲೋ ತೂರಿಹೋಯಿತು. ಓಡಿಹೋಗದೆ ನಿಂತ ಕೊನೆಯ ಗಾಡಿಯವರ ಮೇಲೆ ಊರಿನವರು ಚೆನ್ನಾಗಿಯೇ ಸೇಡುತೀರಿಸಿಕೊಂಡರು! ನಮ್ಮೂರ ಮಡಿವಾಳ ಸಕಾಲದಲ್ಲಿ ಪಂಜು ಹಚ್ಚಿಕೊಂಡು ಬರದಿದ್ದರೆ ಗೌಡರ ಗಾಡಿಯಲ್ಲಿದ್ದ ಯಾರೂ ಉಳಿಯುತ್ತಿರಲಿಲ್ಲ!

ಸಣ್ಣಪ್ಪನ ದೊಡ್ಡ ಮಗಳ ಮದುವೆ ನಿಶ್ಚಯವಾಯಿತು. ಲಕ್ಕಮ್ಮ ಅವರಿವರ ಕಾಲು ಹಿಡಿದು ಒಂದಷ್ಟು ದಿನಸಿ, ಹಣ ಕಲೆಹಾಕಿದಳು. ಲಗ್ನಪತ್ರಿಕೆ ಮೈಸೂರಿನಲ್ಲಿದ್ದ ನನಗೂ ಬಂದಿತು. ಮದುವೆಗೆ ಮೂರು ದಿನ ಮುಂಚೆ ಸಣ್ಣಪ್ಪ ಮತ್ತೊಂದು ಲಗ್ನಪತ್ರಿಕೆಯನ್ನು ಹಿಡಿದು ಮೈಸೂರಿಗೆ ಬಂದ. ಮಂಗಳಕಾರ್ಯಕ್ಕೆ ಕೈಲಾದ ನೆರವನ್ನು ನೀಡಲು ನಾನೂ ಹಿಂದೆಗೆಯಲಿಲ್ಲ! ಗಂಡಿನ ಬಟ್ಟೆ, ಹೆಣ್ಣಿಗೊಂದು ಧಾರೆ ಸೀರೆಯನ್ನು ನಾನು ಕೊಡಿಸಬೇಕೆಂದು ಸಣ್ಣಪ್ಪ ಹಟಹಿಡಿದ. ಇಲ್ಲ ಎನ್ನಲು ಬಾಯಿಬರದೆ ಪೇಟೆಗೆ ಕರೆದುಕೊಂಡು ಹೋಗಿ ಒಂದು ಒಳ್ಳೆಯ ಪಂಚೆ, ಅಂಗಿಯ ಬಟ್ಟೆಯನ್ನು ಕೊಡಿಸಿದೆ. ಮಗಳಿಗೆ ಸೀರೆಯನ್ನೂ ಕೊಡಿಸಿದೆ.

"ಗಂಡಿಗೆ ಒಂದು ಒಳ್ಳೆ ಚೌಕಾನು ಬೇಕು!" ಎಂದ ಸಣ್ಣಪ್ಪ, ಅದನ್ನೂ ಕೊಡಿಸಿಯಾಯಿತು. ಮದುವೆಗೆ ಮಾತ್ರ ಬರಲಾಗುವುದಿಲ್ಲ ವೆಂದು ಮೊದಲೇ ತಿಳಿಸಿದ್ದೆನಾದ್ದರಿಂದ ಸಣ್ಣಪ್ಪ ಊರಿಗೆ ಹಿಂದಿರುಗಿದ.

ಈ ನಡುವೆ ಎರಡು ಮೂರು ತಿಂಗಳು ಊರಿಗೆ ಹೋಗಲಾಗಲಿಲ್ಲ. ಒಮ್ಮೆ ಹೋದಾಗ ಎದುರುಮನೆ ಕೆಂಪಣ್ಣ ಮಾತಿನ ನಡುವೆ "ಮದುವೆಯ ದಿನ ಗಂಡಿಗಿಂತ ಸಣ್ಣಪ್ಪನೇ ಗಂಡಾಗಿ ಓಡಾಡುತ್ತಿದ್ದ. ಒಳ್ಳೊಳ್ಳೆಯ ಬಟ್ಟೆಯನ್ನು ಹಾಕಿಕೊಂಡು" ಎಂದಾಗ, ನನಗೆ ಸಹಜವಾಗಿ ಅನುಮಾನ ವಾಯಿತು. ಲಕ್ಷ್ಮವ್ವನನ್ನು ಕರೆಸಿ ಕೇಳಿದೆ. ಒಂದು ಸೀರೆ ಮಾತ್ರ ತಂದು ಕೊಟ್ಟರೆಂದಳು. ಸಣ್ಣಪ್ಪನ ಮೇಲೆ ತುಸು ಕೋಪವೇನೋ ಬಂದಿತು! ಆದರೆ ಹಿಂದೆಯೇ ನಗು ಉಕ್ಕಿ ಬಂದಿತು! ಊರ ಜನರ ಮುಂದೆ ಸಣ್ಣಪ್ಪನ ಮಾನ ವನ್ನು ಮೂರು ಕಾಸಿಗೆ ಹಂಚಲು ನಾನು ಇಷ್ಟಪಡಲಿಲ್ಲ. ಹೀಗೆ ಗಂಡಿನ ಬಟ್ಟೆಗಳನ್ನೆಲ್ಲ ತಾನೇ ಹೊಲಿಸಿಕೊಂಡನೆಂದರೆ ಲಕ್ಕವ್ವ ಸಣ್ಣಪ್ಪನನ್ನು ಉಳಿಸಿ ಯಾಳೆ ಎಂಬ ಭಯವೂ ಆಗದಿರಲಿಲ್ಲ. "ಸುಮ್ಮನೆ ಕೇಳಿದೆ" ಎಂದು ಮಾತನ್ನು ತೇಲಿಸಿ ಸಣ್ಣಪ್ಪನ ಸಂರಕ್ಷಣೆ ಮಾಡಿದ ಹೆಮ್ಮೆಯಿಂದ ಸಮಾಧಾನ ತಂದು ಕೊಂಡೆ! ಸಣ್ಣಪ್ಪ ಮಾತ್ರ ತನಗೇನೂ ತಿಳಿಯದವನಂತೆ ಎಂದಿನ ಸಲಿಗೆ ಎಂದಿನ ಸ್ನೇಹವನ್ನೇ ನಟಿಸುತ್ತ ಆ ವೇಳೆಗಾಗಲೇ ಚೆನ್ನಾಗಿ ಮಾಸಿ ಬಣ್ಣಗೆಟ್ಟಿದ್ದ ಆ ಬಟ್ಟೆಗಳನ್ನೇ ಹಾಕಿಕೊಂಡು ನನ್ನೊಡನೆ ನಗುತ್ತ, ನುಡಿಯುತ್ತ ಇದ್ದುಬಿಟ್ಟ.

ಸಂಜೆ ಇಬ್ಬರೇ ತೊರೆಯ ದಾರಿಯಲ್ಲಿ ಹೋಗುತ್ತಿದ್ದಾಗ ಮೆಲ್ಲನೆ ಆ ಸುದ್ದಿಯನ್ನು ಎತ್ತಿಕೊಂಡೆ! ಸಣ್ಣಪ್ಪನ ತುಟಿಯ ಮೇಲೆ ತಿಳಿನಗೆಯೊಂದು ತೇಲಿಹೋಯಿತು. ಸಣ್ಣಪ್ಪ ಬಹಳ ಚೆನ್ನಾಗಿಯೇ ಸಮರ್ಥಿಸಿಕೊಂಡ. ಅವನ ವಾದಕ್ಕೆ ನಾನೂ ತಲೆದೂಗಿದೆ.

ಅವನಿಗೊಂದು ಅಂಗಿಯನ್ನಾದರೂ ಲಕ್ಕವ್ವ ಹೊಲಿಸದಿರುವಾಗ ಸಣ್ಣಪ್ಪ ನಾದರೂ ಮಾಡುವುದೇನು! ಆ ಹರುಕು ಕೋಟು, ಮಾಸಲು ಪಂಚೆಯಲ್ಲಿ 'ಹೆಣ್ಣಿನ ತಂದೆ' ಎಂದು ಬೀಗರಿಗೆ ಮುಖ ತೋರಿಸುವುದಾದರೂ ಎಂತು ಅವನು! ಬಂಧು ಬಳಗವೆಲ್ಲ ಸೇರುವಾಗ ನಾಲ್ಕು ಜನರ ಮುಂದೆ ತಾನೂ

'ಮಾನ'ವನ್ನು ಉಳಿಸಿಕೊಳ್ಳಬಾರದೆ! ಮಗಳ ಮದುವೆಯಲ್ಲಾದರೂ ಅವನು ಹೊಸಬಟ್ಟೆಗಳನ್ನು ಧರಿಸಿ ತಲೆಯೆತ್ತಿಕೊಂಡು ಓಡಿಯಾಡಬೇಕೆಂಬುದು ಲಕ್ಕವ್ವನಿಗೆ ತಿಳಿಯದಿದ್ದರೆಂತು! ಸೋಮೇಶ್ವರ ಶತಕದ ಪದ್ಯವೊಂದನ್ನು ಸಣ್ಣಪ್ಪನೇ ನೆನಪು ಮಾಡಿಕೊಂಡ—

ಗಿಡವೃಕ್ಷಂಗಳಿಗಾರು ನೀರನೆರೆವರ್ ನಿತ್ಯಂ ಮಹಾರಣ್ಯದೊಳ್
ಕಡುಕಾರ್ಪಣ್ಯದಿ ಕೇಳ್ವವೇ ಶಿಖಿಜಲೋರ್ವೀಮಾರುತಾಕಾಶವಂ
ಮೃಡ ನೀನಲ್ಲದಾರು ಕಾಯ್ವರು ಜಗದ್ವೃಕ್ಷಂ ಕರಂ ನೀನೆಲೈ
ಕೊಡುವರ್ ಕೊಂಬರು ಮರ್ತ್ಯರೇ ಹರಹರಾ ಶ್ರೀ ಚೆನ್ನ ಸೋಮೇಶ್ವರಾ

ನಿಜ. ನಮ್ಮ ಸಣ್ಣಪ್ಪ ಅಡವಿಯ ಗಿಡ. ಮನೆ ಮಡದಿ ಮಕ್ಕಳು ಇದ್ದೂ ಅವನು ಅನಾಥ! ಮದುವೆಯಾಗದಿದ್ದರೆ ಅವನು ದೊಡ್ಡ ಯೋಗಿಯಾಗುತ್ತಿದ್ದ! ಈ ಜಗತ್ತಿನ ಮಾಯೆ ಅವನನ್ನು ಈ ಸಂಸಾರವೆಂಬ ಮೇಟಿಯ ಕಂಬಕ್ಕೆ ಬಿಗಿದು ಕಟ್ಟಿತು! ಆದರೆ ಅವನು ನಿರ್ಲಿಪ್ತ. ಸಂಸಾರದ ಕ್ಷುದ್ರ ಜಗತ್ತಿನಿಂದ ಮೇಲೆದ್ದು ಆನಂದಮಯ ಪ್ರಪಂಚದಲ್ಲಿ ನಿತ್ಯವಿಹಾರಿಯಾಗಿದ್ದಾನೆ! ಅವನ ಊಟವೆಲ್ಲೋ, ಅವನು ಮಲಗುವುದೆಲ್ಲೋ! ಅವನ ಬಟ್ಟೆ ಬರೆಗಳನ್ನು ಯಾರು ಒದಗಿಸುವರೋ! ಆದರೂ ಅವನ ಸಂತೃಪ್ತಿ, ನೆಮ್ಮದಿ ಯಾರಿಗೂ ಬರವು! ಯಾವುದನ್ನೂ ಹಚ್ಚಿಕೊಳ್ಳದ, ಯಾರಿಗೂ ಕೇಡೆಣಿಸದ, ಅವನನ್ನು ಕಂಡರೆ ನಮ್ಮೂರಿನವರಿಗೆ ಒಂದು ಬಗೆಯ ಗೌರವ, ಆದರ. ಆದರೆ ಲಕ್ಕವ್ವನಿಗೆ ಹೇಗೊ!

# ಎಡದಿಣ್ಣೆಯ ಆಲ

ಸಿನೆಮ, ನಾಟಕ, ರೇಡಿಯೋಗಳ ನೊರೆತೆರೆಗಳನ್ನು ಹಾದು ಏಳು ಸಮುದ್ರದಾಚೆಯ ಕೀಳು ಸಮುದ್ರದ ಎಡದಿಣ್ಣೆಯ ಮೇಲೆ ವಿಹರಿಸುವ ಹವ್ಯಾಸ ಬದುಕಿಗೆ ಅಂಟಿ ಬಂದಿತು. ಆ ಎಡದಿಣ್ಣೆಯ ಮೇಲಿನ ಮುದಿ ಯಾಲದ ಮರವನ್ನು ನೋಡುತ್ತೇನೆ; ಅದರ ವಿಚಿತ್ರವಾದ ಪೊಟರೆಯನ್ನು ಹೊಕ್ಕು ಹಾವು, ಚೇಳು, ರಕ್ಕಸರಿದ್ದರೆ ಮಾಯದ ಬೂದಿಯನ್ನು ಮಂತ್ರಿಸಿ ಒಳಹೊಕ್ಕು ಕಂಚಿನಕರಿ ಬಾನದ ಬಳಿಗೆ ಬರುತ್ತೇನೆ! ಅಲ್ಲಿ ಮುತ್ತು ರತ್ನ ವಜ್ರ ವೈಢೂರ್ಯಗಳೆಲ್ಲ ಮಿಂಚಿನಂತೆ ಹೊಳೆಯುತ್ತವೆ! ಎಲ್ಲವನ್ನೂ ರಾಶಿ ರಾಶಿಯಾಗಿ ಬಾಚಿ ಜೋಳಿಗೆಯನ್ನು ತುಂಬಿಕೊಂಡು ಹಿಗ್ಗಿದ್ದೇನೆ. ಅಂಥ ಐಶ್ವರ್ಯವನ್ನು ಕೊಟ್ಟ ಆ ಆಲಕ್ಕೆ ಮಣಿಯುತ್ತೇನೆ. ಇಂದೂ, ಎಂದೆಂದೂ ನೆನೆದು ಪೂಜಿಸುತ್ತೇನೆ.

ಗೌರಿಯ ದಿನಗಳಲ್ಲಿ ಒಮ್ಮೆ ಬಂಧುಗಳ ಊರಿಗೆ ಹೋಗಿದ್ದೆ. ಕೊನೆಯ ಹಳ್ಳಿಯ ಆಲದಮರದ ಕೆಳಗೆ ಆಗ ಯಾವ ತಂಡವೂ ಕಾಣಲಿಲ್ಲ. ನಾಲ್ಕು ದಿಕ್ಕಿನ ಜನಪದ ಕಲಾವಿದರು ಕೂಡುವ ನೆಲೆಯದು. ತಂಡಗಳಲ್ಲಿ ಬರುವ ಜೋಗಿಗಳು, ಏಕಾಂಗಿಯಾಗಿ ಬರುವ ಶೆಟ್ಟಿ ಬಣಜಿಗರು, ಗುಂಪುಕಟ್ಟಿ ಬರುವ ಗೊರವರು, ದೊಂಬಿದಾಸರು ಹೀಗೆ ವರ್ಷದ ಎಲ್ಲ ದಿನಗಳಲ್ಲೂ ಒಂದಲ್ಲ ಒಂದು ತಂಡ ಅಲ್ಲಿ ತಂಗಿರುತ್ತದೆ. ಅಲ್ಲೊಂದು ಅಂಗಡಿಯನ್ನಿಟ್ಟು ವರ್ಷದ ಎಲ್ಲ ದಿನಗಳಲ್ಲೂ ಅಲ್ಲೇ ಏಕೆ ಹಾದಿ ಕಾಯಬಾರದು ಎನಿಸಿಬಿಡುತ್ತದೆ ಒಮ್ಮೊಮ್ಮೆ. ಅನೇಕ ಕಲಾವಿದರನ್ನು ಅವರ ಪಯಣದ ಮಧ್ಯದಲ್ಲಿ ಸೆರೆ ಹಿಡಿದ ನಾನು ಹತ್ತಿ ರವೇ ಇದ್ದ ಪ್ರತಿಭಾಜ್ಯೋತಿಯೊಂದನ್ನು ಕಾಣಲು ಕೆಲವಾರು ದಿನಗಳೇ ಕಾಯ ಬೇಕಾಯಿತು.

''ನೀವು ಕರಪಾಲವನ್ನು ನೋಡಿದ್ದೀರ?'' ನನ್ನ ಗೀಳನ್ನು ಬಹು ಬೇಗ ಗುರುತಿಸಿದ ನನ್ನಾಕೆ ಮದುವೆಯಾದ ಹೊಸ್ತಿಲಲ್ಲೇ ಈ ಪ್ರಶ್ನೆಯನ್ನು ಹಾಕಿ ದಾಗ ನನಗೆ ಆಶ್ಚರ್ಯವಾಯಿತು.

''ಅದೇನು ಕರಪಾಲ! ವಿಚಿತ್ರವಾಗಿದೆ ಹೆಸರು?'' ಎಂದೆ, ಆ ಒಂದರಲ್ಲಾದರೂ ನನ್ನ ಅಜ್ಞಾನವನ್ನು ಒಪ್ಪಿಕೊಂಡು!

"ಇದೇನು ಕರಪಾಲ ಗೊತ್ತಿಲ್ಲ ಎನ್ನುತ್ತೀರಿ?" ನಮ್ಮ ಜಯಣ್ಣನೂ ಮಧ್ಯೆ ಪ್ರವೇಶಿಸಿ ನನ್ನತ್ತ ಸೋಜಿಗದ ನೋಟವನ್ನೆಸೆದ. ಕುತೂಹಲ ಕೆರಳಿದ ನಾನು ಸಹಜವಾಗಿ ಮೇಲಿಂದ ಮೇಲೆ ಪ್ರಶ್ನೆ ಹಾಕಿದೆ, ಕೊಠಡಿಯಲ್ಲಿದ್ದ ನನ್ನ ಟಿಪ್ಪಣಿ ಪುಸ್ತಕವನ್ನೂ ತರಿಸಿಕೊಂಡೆ. ಹೊಸ ವಿಷಯವನ್ನೊದಗಿಸಿದ ಹೆಮ್ಮೆಯಿಂದ ನನ್ನಾಕೆ ಕರಪಾಲವೆಂದರೇನು ಎಂಬ ವಿವರವನ್ನು ನೀಡಿದರೂ ಆ ಚಿತ್ರವನ್ನು ಕಲ್ಪಿಸಿಕೊಳ್ಳಲಾಗಲಿಲ್ಲ. ಯಕ್ಷಗಾನ ಬಯಲಾಟದಲ್ಲಿ ಕುಣಿದು ಪಳಗಿದ ನಮ್ಮ ಜಯಣ್ಣ, "ಕರಪಾಲದ ಅಯ್ಯನವರು ಹೀಗೆ ಕುಣಿಯುತ್ತಾರೆ!" ಎಂದು ವಿಚಿತ್ರಭಂಗಿಯಲ್ಲಿ ಕುಣಿದು ಹಾಡಿ, ಕಥೆ ಹೇಳಿ ತೋರಿಸಿದ. ಆ ಕರಪಾಲದ ಅಯ್ಯನವರನ್ನು ಕಾಣುವ ಕಾತರ ಹೆಚ್ಚಾಯಿತು, ಗೌರಿಯ ಹಬ್ಬದ ದಿನವೇ ಕರಪಾಲವನ್ನು ನಡೆಸುವುದಾಗಿ ಬಂಧುಗಳು ಭರವಸೆ ನೀಡಿದರು.

ಹಬ್ಬದ ದಿನ ಊರನ್ನು ತಲಪುವುದು ಸ್ವಲ್ಪ ತಡವೇ ಆಯಿತು. ಸುಯ್ಯೋ ಎಂದು ಬೀಸುವ ಆ ಗಾಳಿಯಲ್ಲಿ, ಹನಿಯುವ ಜಿಡಿಯಲ್ಲಿ ಊರನ್ನು ಸೇರಿ ರಾಮ ಮಂದಿರದ ಕಡೆಗೆ ನಡೆದೆ. ರಾಮ ಮಂದಿರದ ಮುಂದೆ ಒಂದು ಪುಟ್ಟ ಚಪ್ಪರ ಸಿದ್ಧವಾಗಿತ್ತು. ಓಣಿಯ ಒಡಲು ತುಂಬಿ ತುಳುಕುವಂತೆ ಜನ ಕವಿದಿದ್ದರು. ಚಪ್ಪರದಲ್ಲಿ ಕಣ್ಣಾಡಿಸಿದಾಗ ಕೋಡಂಗಿ ವೇಷವೋ ಎಂಬ ಭ್ರಮೆಯನ್ನು ತಂದ ಒಬ್ಬ ವ್ಯಕ್ತಿ ನನ್ನತ್ತ ಒಮ್ಮೆ ತಿರುಗಿ ನೋಡಿತು ! ತಲೆಯ ಮೇಲೆ ಚೂಪಾದ ವಿಚಿತ್ರಾಕಾರದ ಒಂದು ಕುಲಾವಿ, ಪಕ್ಕದಲ್ಲಿ ಅತ್ತಿತ್ತ ತೊನೆಯುವ ತುರಾಯಿ, ಕೊರಳಲ್ಲಿ ದಪ್ಪ ರುದ್ರಾಕ್ಷಿಸರ, ಮುಖಕ್ಕೆಲ್ಲ ಬಳಿದ ಭಸಿತ. ಬಿಗಿದ ಕಚ್ಚೆಯನ್ನು ಸುತ್ತಿಕಟ್ಟಿದ ಹಸಿರು ನಡುಪಟ್ಟಿ, ತನ್ನ ಅಕ್ಕಪಕ್ಕದಲ್ಲಿ ಇಬ್ಬರನ್ನು ನಿಲ್ಲಿಸಿಕೊಂಡು ಹತ್ತುವರ್ಷ ಹಳೆಯ ತನ್ನ ಕನ್ನಡಕವನ್ನು ಸರಿಪಡಿಸಿಕೊಂಡು ಆ ವ್ಯಕ್ತಿ

ಶ್ರೀ ಗುರುವರನೆ ಜಯತು
ಭೋಗಿ ವಿಭೂಷಣ ಯೋಗಿವರನೆ ಜಯತು !

ಎಂದು ಹಾಡಲು ಆರಂಭಿಸಿದಾಗ ಆ ಗ್ರಾಮದ ಪ್ರಶಾಂತ ರಾತ್ರಿಗೂ ವೈ ಪುಳಕ ಹರಿದಾಡಿತು. ನಡುವಿನ ಗುರು ತಲೆಯನ್ನು ಅತ್ತಿತ್ತ ಒಗೆಯುತ್ತ ತಾಳಗಳನ್ನು ಹಾಕುತ್ತ ಮುಮ್ಮೇಳವನ್ನು ಮುಗಿಸುತ್ತಿದ್ದಂತೆಯೆ ಅತ್ತಿತ್ತ ಘುಮುಕಿ ಮತ್ತು ತಾಳಗಳನ್ನು ಹಿಡಿದು ಮತ್ತಿಬ್ಬರು ಹಾಡುತ್ತಾ ಕುಣಿಯತೊಡಗಿದರು. ಗುರು ಹೆಜ್ಜೆಯ ಗತ್ತನ್ನು ಅತ್ತಿತ್ತ ಒಗೆದು ಎತ್ತಿಕೊಟ್ಟಂತೆ ಹಿಂದೆ ಮುಂದೆ ಸರಿಯುತ್ತ ಗುಡ್ಡರು ವಿಶಿಷ್ಟ ಭಂಗಿಯಲ್ಲಿ ಕುಣಿಯುತ್ತ ಹಾಡುತ್ತ ಮೇಳಕ್ಕೆ ಮೆರುಗನ್ನು ತಂದರು. ಕೆಳಗೆ ಕುಳಿತ ಒಬ್ಬಿಬ್ಬರೂ ದನಿಕೊಟ್ಟರು.

ಕರಪಾಲ ಮೇಳ ಆರಂಭವಾಯಿತು! ಶುಭ್ರಬಿಳಿಯ ವಸ್ತ್ರದ ಗುಡ್ಡರ ನಡುವೆ ತನ್ನದೇ ಆದ ಭಂಗಿಯಲ್ಲಿ ತೂಗುತ್ತ ಬಾಗುತ್ತ ತಾಳಕ್ಕೆ ತಕ್ಕ ಗತ್ತಿನಲ್ಲಿ ಹೆಜ್ಜೆ ಹಾಕುತ್ತ ಹಿಂದೆ ಮುಂದೆ ಸರಿಯುತ್ತ ಎಲ್ಲರ ಆಸಕ್ತಿಯನ್ನು ಸೆಳೆದ ಕಾವಿಯ ವಸ್ತ್ರಧಾರಿ ಸಿದ್ದಯ್ಯನವರ ಹಾಡುಗಾರಿಕೆಯ ವೈಶಿಷ್ಟ್ಯಕ್ಕೆ ಜನ ಮೆಚ್ಚಿ ತಲೆತೂಗಿದರು. ಅರುವತ್ತರ ಗಡಿಯ ಅವರ ಉತ್ಸಾಹ, ಹುಮ್ಮಸ್ಸುಗಳಿಗೆ ಯಾರಾದರೂ ಬೆರಗಾಗಬೇಕಾದುದೇ !

ಕರಪಾಲ ಮೇಳ ಹಳ್ಳಿಯ ಬಯಲಾಟವಲ್ಲ ! ವೇಷಭೂಷಣಗಳ ಭಾರ ಅದಕ್ಕಿಲ್ಲ; ಸಂಗೀತ ಸಾಹಿತ್ಯದ ಕ್ಲಿಷ್ಟತೆ ಅದಕ್ಕಿಲ್ಲ! ನೃತ್ಯದಲ್ಲೂ ಸಾಧಿಸಿದ ಸರಳತೆ, ಆಯ್ದ ಕತೆ ಸರಳ, ಹಾಡುವ ಪದ ಸರಳ, ನಿರೂಪಿಸುವ ವಿಧಾನ ಸರಳ! ಇಂಥದೊಂದು ಜನಪದ ಕಲೆಯನ್ನು ಪ್ರಥಮ ಬಾರಿಗೆ ಕಂಡ ನಾನು ಮೂಕನಾಗಿ ಕುಳಿತೆ!

ಹಾಲು ಮಾರುವ ಬೀದಿ ನೂಲು ಮಾರುವ ಬೀದಿ
ಶಾಲು ಸಕಲಾತಿಗಳ ಮಾರುವ ಬೀದಿ ಮಾರುವ ಬೀದಿ

ಕುಳಿತ ಜನ, ಕೇಳುವ ಕಿವಿಗಳನ್ನು ಗಮನಿಸದೆಯೇ ಸೃಷ್ಟಿಯಾದ ಕ್ಲಿಷ್ಟ ಪದಪುಂಜಗಳ ಮಾಲೆಯಲ್ಲ ಅದು ! ಚದುರಂಗರಾಯನ ಮಧುರಾವತಿ ಪಟ್ಟಣವನ್ನು ಬಣ್ಣಿಸುವ ಕವಿ ಜನಸಾಮಾನ್ಯರ ಅನುಭವಕ್ಕೆ ನಿಲುಕದ ವಸ್ತು ವಿಷಯಗಳ ಕಡೆ ಲಕ್ಷ್ಯವೀಯನು. ಅವನ ಮಾತು, ಅವನ ರೀತಿ ಎಲ್ಲವೂ ಸರಳ, ಸುಭಗ! ಕರಪಾಲ ಮೇಳ ಸಿದ್ದಯ್ಯನವರಂಥ ಅಪ್ರತಿಮ ಕಲಾವಿದರ

ಪ್ರತಿಭೆಯಿಂದ ಕನಸಿನ ಲೋಕವೊಂದನ್ನೇ ಸೃಷ್ಟಿಸುತ್ತಿರುವಂತೆ ಭಾಸವಾಗ ತೊಡಗಿತು. ಅಲ್ಲಿ ರಂಗಸಜ್ಜಿಕೆಯಿಲ್ಲ, ವಾದ್ಯಗಳ ವಿಜೃಂಭಣೆಯಿಲ್ಲ, ವೇಷ ಭೂಷಣಗಳ ಆಕರ್ಷಣೆಯಿಲ್ಲ. ಆದರೂ ಸುಸಜ್ಜಿತ ರಂಗಮಂದಿರವೊಂದರಲ್ಲಿ ಸುಸಂಬದ್ಧ ನಾಟಕವೊಂದನ್ನು ಕಣ್ಣಿಗೆ ಕಟ್ಟಿಸಿದ, ಹೃದಯಕ್ಕೆ ಮುಟ್ಟಿಸಿದ ಸೊಗಸು, ಸೌಂದರ್ಯ ಅಲ್ಲಿ ಮೇರೆವರಿಯಿತು.

ಪದ ಮುಗಿಯುತ್ತದೆ, ಕುಣಿತದ ಗುತ್ತಿನಲ್ಲಿ ತೇಲಿತೇಲಿ ಮತ್ತೆ ಅಂಥದೇ ಪದ್ಯಗಂಧಿ ಗದ್ಯಶೈಲಿಯಲ್ಲಿ ಕಥಾನಿರೂಪಣೆ ಆರಂಭವಾಗುತ್ತದೆ.

"ಅಯ್ಯಾ ಮಗು ಕೇಳಬೇಕಯ್ಯ!"

"ಆಗಲಿ ಗುರುವೇ......."

"ಮಧುರಾವತಿ ಮಧುರಾವತಿ ಎಂಬುದೊಂದು ಪಟ್ಟಣ...."

"ಹೌದು ಗುರುವೆ !"

"ಆ ಪಟ್ಟಣದಲ್ಲಿ ಚದುರಂಗರಾಯರು ಹೇಗೆ ರಾಜ್ಯಭಾರ

ಮಾಡುತ್ತಿದ್ದಾರೆಂದರೇ"

"ಹೇಗೆ ಮಾಡುತ್ತಿದ್ದಾರೆ ಗುರುವೇ ?"

ಗಂಭೀರವಾದ ಮನೋಜ್ಞವಾದ ಶೈಲಿಯಲ್ಲಿ ಕಥೆಯನ್ನು ಮುಂದೆ ನಡೆಸಿದ ಸಿದ್ದಯ್ಯನವರು ಯಾವ ಪುರಾಣರಾಶಿಗೂ ಕಥಾವಸ್ತುವಿಗಾಗಿ ಕೈಚಾಚಲಿಲ್ಲ. ಜನಸಾಮಾನ್ಯರ ವಾಙ್ಮಯ ಭಂಡಾರದ ಒಂದು ಸಾಮಾನ್ಯ ಕಥೆಯನ್ನೇ ಆರಿಸಿಕೊಂಡು ಅಲ್ಲಿಷ್ಟು ಇಲ್ಲಿಷ್ಟು ಹಿಗ್ಗಿಸಿ, ಅಲಂಕರಿಸಿ, ಸಂಸ್ಕರಿಸಿ ಹೇಳತೊಡಗಿದ್ದಾರೆ. ಎಲ್ಲ ಪಾತ್ರಗಳೂ ಸಿದ್ದಯ್ಯನವರ ಬಾಯಲ್ಲಿ ಜೀವಂತವಾಗಿ ಅವತರಿಸುತ್ತವೆ. ಶುದ್ಧವಾದ, ಸುಸಂಸ್ಕೃತವಾದ ಶೈಲಿಯಲ್ಲಿ ಕಥೆ ಬೆಳವಣಿಗೆಯನ್ನು ಪಡೆದುಕೊಳ್ಳುವಾಗ ರಸವತ್ತಾದ ಸನ್ನಿವೇಶಗಳಲ್ಲಿ ನಿರೂಪಕನ ಅಭಿನಯ ಮುಗಿಲು ಮುಟ್ಟುತ್ತದೆ. ಕರವಸ್ತ್ರದ ನೆರವಿನಿಂದ ಮುಖವನ್ನು ಮುಚ್ಚಿ ದುಃಖವನ್ನು ನಟಿಸುವುದು, ಶೃಂಗಾರ ಸನ್ನಿವೇಶಗಳಲ್ಲಿ ಪಕ್ಕದ ಗುಡ್ಡನ ಗಲ್ಲವನ್ನು ಹಿಡಿದು ಪ್ರೇಮದ ನಲ್ಲನಂತೆ ನುಡಿಯುವುದು. ಸ್ತ್ರೀಪಾತ್ರದ

ಒಯ್ಯಾರವನ್ನು ತರುವಲ್ಲಿ ತನ್ನ ಗಲ್ಲದ ಮೇಲೆ ಒಂದು ಬೆರಳಿಟ್ಟು ವನಪಿನಿಂದ ಮಾತಾಡುವುದು, ಆಯಾ ಭಾವಕ್ಕೆ ಆಯಾ ರೂಪಕ್ಕೆ ಉಚಿತವಾದ ಅಭಿನಯ ಕೌಶಲವನ್ನು ಮೆರೆಯುವುದು, ತಟ್ಟನೆ ಗದ್ಯದಿಂದ ಪದ್ಯಕ್ಕೆ ಜಿಗಿದು ನೃತ್ಯ ವೈಖರಿಯ ಸೊಗಸನ್ನು ಬಿತ್ತುವುದು–ಇದು ಸಿದ್ದಯ್ಯನವರಿಗೆ ಮಾತ್ರ ಸಿದ್ಧಿಸಿದ ಕಲೆ. ಸಾಧಾರಣ ವಸ್ತುಗಳನ್ನು ಆರಿಸಿ ಅದ್ಭುತ ಸೌಧವೊಂದನ್ನು ನಿರ್ಮಿಸಿದಂತೆ ಸಿದ್ದಯ್ಯನವರ ಕಥಾನಿರೂಪಣೆ ಬೆಳೆಯುತ್ತ ಸಾಗಿತು.

ಅದು 'ಕಾಡು ಸಿದ್ದಮ್ಮ'ನ ಕಥೆ. ತಬ್ಬಲಿಯಾದ ಆ ಹೆಣ್ಣುಮಗುವಿನ ಕಷ್ಟ ಪರಂಪರೆಗಳನ್ನು ಕೇಳುತ್ತ ಕೇಳುತ್ತ ಹೆಂಗಸರು ಗಳಗಳನೆ ಕಣ್ಣೀರಿಟ್ಟರು. ಒಂದು ಘಟ್ಟದಲ್ಲಿ ಕರವಸ್ತ್ರನ್ನು ಮುಚ್ಚಿ ಸಿದ್ದಯ್ಯನವರು ಅಳುವನ್ನು ನಟಿಸುವಾಗ ಇದ್ದಕ್ಕಿದ್ದಂತೆಯೇ ಪಕ್ಕದಲ್ಲಿ ಘುಮುಕಿಯನ್ನು ಹೊತ್ತುನಿಂತ ಗುಡ್ಡ ತಿವಿದು ಎಚ್ಚರಿಸಿದ—

"ಅಯ್ಯೋ ನೀವ್ಯಾಕ್ರಿ ಅಳ್ತೀರಿ ಅಯ್ನೋರೇ !"
"ಅಲ್ಲ ನಾನ್ಯಾಕಳ್ಲೀ—"

ಎಚ್ಚತ್ತು ತಟ್ಟನೆ ಮುಂದಿನ ಕಥೆಗೆ ಸಾಗುವಾಗ ನಡುವೆ ನವುರಾದ ಹಾಸ್ಯ! ಕಥೆಯನ್ನು ಒಂದು ತಿರುವಿನಲ್ಲಿ ನಿಲ್ಲಿಸಿ ಹಾಸ್ಯ ಕಥೆಯೊಂದನ್ನು ಸಿದ್ದಯ್ಯನವರು ಎತ್ತಿಕೊಳ್ಳುವರು: "ಆದಿರ್ಲಿ ಇಲ್ಲಿ ಕೇಳು . ಒಂದು ಸಲ ..." ಜನರಲ್ಲಿ ಉಲ್ಲಾಸ ಹರಿದಾಡುವುದು; ಮಲಗಿದ್ದವರು ಎದ್ದು ಕೂರುವರು; ನಿದ್ದೆಯ ಮಂಪರಿನಲ್ಲಿದ್ದವರು ಮೈಕೊಡವಿಕೊಳ್ಳುವರು. ಒಳ್ಳೆಯ ಸಾಹಿತ್ಯಿಕ ಭಾಷೆಯಲ್ಲಿ ಮುಖ್ಯ ಕಥೆಯನ್ನು ಬೆಳಸಿದ ಕಲಾವಿದನೇ ಗ್ರಾಮ ಜೀವನದ ನೈಜ ಭಾಷೆಯ ಆಶ್ರಯ ಪಡೆಯುತ್ತಾನೆ, ತನ್ನ ಉಪಕಥೆಗೆ! ವಸ್ತುವೂ ಅಲ್ಲಿಂದಲೇ ಆದುದು! ಸಿದ್ದಯ್ಯನವರ 'ಪೂಜಾರಿ ಪುಟ್ಟಕ್ಕ'ನ ಕಥೆ ಹೊಸ ಬಗೆಯ ಹರ್ಷದ ಹೊನಲನ್ನು ಹರಿಸಿತು ಸಭಿಕರಲ್ಲಿ!

ಪೂಜಾರಿ ಪುಟ್ಟಕ್ಕನ ಕತೆ ಯಾವುದೇ ಕಾಲದ ರಾಜ–ರಾಣಿಯರ ಕಷ್ಟ ಸುಖಗಳನ್ನು ಚಿತ್ರಿಸುವ ಕಥೆಯಲ್ಲ. ಹಳ್ಳಿಯಲ್ಲಿ ನಿತ್ಯವೂ ಗೋಚರಿಸುವ ಸುಲಕ್ಷಣ ಪ್ರಸಂಗಗಳ ಒಂದು ಮಾಲೆ. ನಗೆ ಆದರ ಪ್ರಧಾನ ಉದ್ದೇಶ.

ಪೂಜಾರಿ ಪುಟ್ಟಕ್ಕನ ವ್ಯಕ್ತಿತ್ವವನ್ನು ಚಿತ್ರಿಸುವ ಸಿದ್ದಯ್ಯ ಕಾಡಸಿದ್ದಮ್ಮನ ಗಂಭೀರತಮ ಕಥೆಯನ್ನು ನಿರೂಪಿಸಿ ಹಾಡಿ ಕುಣಿಯುತ್ತಿದ್ದ ಅಯ್ಯನವರಲ್ಲ; ಹಳ್ಳಿಯ ಸಾಮಾನ್ಯ ರೈತ, ತಾನು ಕಂಡುಂಡ ಪ್ರಸಂಗಗಳನ್ನು ರಸವತ್ತಾಗಿ ಬಣ್ಣಿಸುವ ಒಬ್ಬ ರಸಿಕ. ತನ್ನ ಪಕ್ಕದ ಗುಡ್ಡನ ಭುಜ ಹಿಡಿದು ಆತ್ಮೀಯವಾದ ಗ್ರಾಮದ ಭಾಷೆಯಲ್ಲಿಯೇ ಉಪಕಥೆಯನ್ನು ಬಿತ್ತರಿಸತೊಡಗುತ್ತಾನೆ; ಶಿಷ್ಯ 'ಹ್ಞೂ'ಗುಡುತ್ತಾನೆ; ನಗೆ ಅದರ ಪ್ರಧಾನ ಉದ್ದೇಶ.

ಪುಟ್ಟಕ್ಕನ ಬೆಡಗು ಬಿನ್ನಾಣವನ್ನು ಚಿತ್ರಿಸಿ, ಅವಳ ಮತ್ತು ಗೌಡಮಾವನ ಸಂಬಂಧವನ್ನು ಬಣ್ಣಿಸಿ, ಸುಬ್ರಹ್ಮಣ್ಯ ಜಾತ್ರೆಗೆ ಹೊರಟಂತೆ ನೆಪ ಹೇಳಿ ಮನೆಯ ಮುಂದಿನ ಬೇವಿನ ಮರವನ್ನು ಹತ್ತಿ ರಹಸ್ಯವನ್ನು ಕಂಡುಕೊಂಡ ಪುಟ್ಟಕ್ಕನ ಜಾಣ್ಮೆಯನ್ನು ವಿವರಿಸುವ ಸೊಗಸಿನಲ್ಲಿ ಕಥೆಯನ್ನು ನೋಡುತ್ತಿರುವಂತೆ ನಿರೂಪಿಸುವ ಕೌಶಲವನ್ನು ಮೆರೆಯುತ್ತಾರೆ ಸಿದ್ದಯ್ಯ.

ತನ್ನ ಮನೆಯಲ್ಲಿ ಮಲಗಿದ್ದ ಗೌಡಮಾವನ ಮೂಗಿಗೆ ಕುದಿಯುವ ಎಣ್ಣೆಯನ್ನು ಬಿಡುತ್ತಾನೆ ಪುಟ್ಟಣ್ಣ. ಗೌಡಮಾವ 'ಸರ್ ಸರ್ ಚಟಕ್ ಪಟಕ್ ಎಂದು ಮೂಲಂಗಿಗೆಡ್ಡೆ ಆದ' ಪ್ರಸಂಗವನ್ನು ನಾಟಕೀಯವಾಗಿ ಹೇಳಿ ನಗೆಯ ಹೊನಲನ್ನು ಹರಿಸುತ್ತಾರೆ.

ಪುಟ್ಟಕ್ಕನ ಕತೆ ಬಹಳ ದೊಡ್ಡದು. ಆದರೂ ಕಾಡಸಿದ್ದಮ್ಮನ ಕತೆಯಲ್ಲಿ ಅದೊಂದು ಉಪಕಥೆ. ಅಂಥ ನಾಲ್ಕು ಐದು ಕತೆಗಳನ್ನು ಪ್ರೇಕ್ಷಕರು ಆ ರಾತ್ರಿ ಕೇಳುತ್ತಾರೆ. ಆ ಕತೆಗಳ ಬಗೆಯೇ ಬೇರೆ, ಈ ಪ್ರಧಾನ ಕಥೆಯ ಸೊಗಸೇ ಬೇರೆ.

ಕಾಡಸಿದ್ದಮ್ಮನ ಕತೆ ನೀತಿಪ್ರಧಾನ. ಪೂಜಾರಿ ಪುಟ್ಟಕ್ಕನ ಕತೆ ವಿನೋದಾತ್ಮಕ. ಒಂದು ಕರುಣರಸದ ತುಂತುರನ್ನು ಹನಿಸಿದರೆ, ಮತ್ತೊಂದು ಆಲಿಕಲ್ಲ ಹರ್ಷವೃಷ್ಟಿ, ಹಾಸ್ಯದ ಸುರಿಮಳೆ. ಮಧುರವಾದ ಹಾಡು, ಮನೋಹರವಾದ ಕುಣಿತ, ಮನೋಜ್ಞವಾದ ಮಾತುಗಾರಿಕೆ, ಮೂಕಗೊಳಿಸುವ ಅಭಿನಯ. ಉದಾತ್ತ ಕತೆಗೆ ಉಲ್ಲಾಸದ ಮೇಲು ಹೊದಿಕೆಯಾಗಿ

ಸಂಗೀತ ನೃತ್ಯ. ಕರಪಾಲ ಮೇಳದ ಸೊಗಸಿಗೆ, ಆದರ ವೈವಿಧ್ಯಕ್ಕೆ ಕಲಾವಿದನ ಪ್ರತಿಭಾವಿಲಾಸಕ್ಕೆ ತಲೆದೂಗಿದೆ ನಾನು! ಕಲಾರಸಿಕರನ್ನು ಕುಣಿಸುತ್ತ, ತಲೆದೂಗಿಸುತ್ತ ಅನೇಕ ಗಂಟೆಗಳ ಕಾಲ ಆಡಿ, ಹಾಡಿ, ಸೋಲದ ಸಿದ್ದಯ್ಯನವರು ಒಂದು ಸೋಜಿಗವಾದರೆ ಅಷ್ಟು ವಿಶಿಷ್ಟ ರೂಪದ ಆ ಕರಪಾಲ ಮೇಳ ಮತ್ತೊಂದು ಸೋಜಿಗ! ಗ್ರಾಮಜೀವನದ ನೈಜ ಆವರಣದಲ್ಲಿ ಅಲ್ಲಿನ ನೆಲನೀರಿಗೆ ಒಗ್ಗುವಂಥ ಸುಂದರ ಕತೆಯೊಂದನ್ನು ಹೀಗೆ ಮೇಳವಾಗಿ ಅಳವಡಿಸಿ ಕೊಂಡು ಜನತೆಯ ಕಲಾತೃಷೆಯನ್ನು ನೀಗಿಸುತ್ತ ಬಂದಿರುವ ಅಜ್ಞಾತ ವೃದ್ಧ ಕಲಾಭಿಜ್ಞರನ್ನು ನೋಡುತ್ತ ನೋಡುತ್ತ ನನ್ನ ಕಣ್ಣಲ್ಲಿ ನೀರಾಡಿತು.

ಸಿದ್ದಯ್ಯನವರು ಓದಿದವರಲ್ಲ. ನಾಲ್ಕು ದಶಕಗಳ ಹಿಂದೆಯೇ ಸಹಧರ್ಮಿಣಿಯನ್ನು ಕಳೆದುಕೊಂಡ ಅವರು ನಾಟಕದ ಹುಚ್ಚನ್ನು ಬೆಳಸಿ ಕೊಂಡು ಒಂದು ನಾಟಕದ ಕಂಪನಿಯನ್ನೇ ಸ್ಥಾಪಿಸಲು ಹೊರಟು ಕೈ ಸುಟ್ಟು ಕೊಂಡವರು. ಹೇಮರೆಡ್ಡಿಮಲ್ಲಮ್ಮ ಅವರ ಪ್ರಸಿದ್ಧವಾದ ನಾಟಕ. ಆದರಲ್ಲಿ ಈಶ್ವರನ ಪಾತ್ರಧಾರಿಯಾಗಿ ಸಿದ್ದಯ್ಯನವರು ಹೆಸರಾಗಿದ್ದರು. ಅವರ ಎತ್ತರ ವಿಸ್ತಾರವಾದ ಭುಜ, ಗಂಭೀರ ನಿಲವುಗಳು ಆ ಪಾತ್ರಕ್ಕೆ ಅವರನ್ನು ಹೇಳಿ ಮಾಡಿಸಿದ್ದವು. ಆದರೆ ಅವರ ಕಂಪನಿಯ ನೌಕೆ ಎಲ್ಲೊ ಒಂದು ಕಡೆ ಒಡೆದು ಚೂರಾಯಿತು. ಮುಂದೆ ಸಿದ್ದಯ್ಯನವರು ಉತ್ತರದಿಂದ ಬಂದ ಕರಪಾಲದ ಕೊಟ್ರೂರು ಕುರುಡಯ್ಯನವರನ್ನು ಆಶ್ರಯಿಸಿದರು. ತಮ್ಮ ಗುರುವಿನ ಜೊತೆ ಅನೇಕ ವರ್ಷ ಕರಪಾಲದಲ್ಲಿ ಪಳಗಿ ಉಪಕಥೆಗಳಿಗೆ ಹೆಸರಾದರು. ಜಾವಗಲ್ಲು ಕಡೆಯ ಅನೇಕ ಮೇಳದವರು ಸಿದ್ದಯ್ಯನವರನ್ನು ಉಪಕಥೆಗಳಿಗಾಗಿಯೇ ಕರೆಸಿಕೊಳ್ಳುತ್ತಿದ್ದರು.

ಸಿದ್ದಯ್ಯನವರು ಕಂಪನಿ ಗಣಸೀ ಸಂತೆಯಲ್ಲಿ ಅಪಾರ ನಷ್ಟವನ್ನನುಭವಿ ಸಿತು. ಕಂಪನಿಯ ಗುತ್ತಿಗೆದಾರ ಸದಾರಮೆ ನಾಟಕವನ್ನು ಆಡುವಂತೆ ಒತ್ತಾಯ ಪಡಿಸುತ್ತಿದ್ದ. ಒಂದು ದಿನ ಅವನು ಹಾಗೆಯೇ ಪ್ರಚಾರ ಮಾಡಿ ಒಳಗೆ ಬಂದು "ಸದಾರಮೆ ಆಡಿದರೆ ಆಡಿ ಇಲ್ಲವಾದರೆ ಹಾಸನದಿಂದ ಬೇರೆ ಕರೆಸುತ್ತೇನೆ" ಎಂದು ಹಟ ಹಿಡಿದ. ಹೇಮರೆಡ್ಡಿ ಮಲ್ಲಮ್ಮ ನಾಟಕಕ್ಕೆ

ಸಿದ್ಧತೆ ನಡೆದಿತ್ತು. ವೇಷಧಾರಿಗಳೆಲ್ಲ ಬಣ್ಣ ಬಳಿದುಕೊಂಡಿದ್ದರು. ರಂಗ ಮಂದಿರದಲ್ಲಿ ಜನ ಸಾಕಷ್ಟು ಸೇರಿದ್ದರು. ಸಿದ್ದಯ್ಯನವರು ಶಿವನ ವೇಷ ಹಾಕಿ ತ್ರಿಶೂಲ ಹಿಡಿದು ನಿಂತಿದ್ದರು. ತಮಗೆ ಬಾರದ ನಾಟಕಕ್ಕೆ ಒತ್ತಾಯ ಬಂದಾಗ ಅವರ ಕಣ್ಣಲ್ಲಿ ನೀರಾಡಿತು. ನಾಟಕ ಅಷ್ಟಕ್ಕೇ ನಿಂತಿತು. ಸೇರಿದ್ದ ಜನ ಹೊರಟು ಹೋದರು.

ಕಂಪನಿ ಸಾಲದಲ್ಲಿ ಮುಳುಗಿತು. ನಟರು ಬೀಡಿ ಸೇದುತ್ತೇವೆಂದರೆ ಇವರ ಕೈಯಲ್ಲಿ ಹಣವಿಲ್ಲ. ಮಕ್ಕಳಿಗೆ ತಿಂಡಿ ಕೊಡಲೂ ಕಾಸು ಉಳಿಯಲಿಲ್ಲ. ಅಲ್ಪ ಲಾಭಕ್ಕೆ ಹಾರ್ಮೋನಿಯಂ ಮಾರಿ ಸಾಲ ತೀರಿಸಿ ಗಾಡಿ ಕಟ್ಟಿಕೊಂಡು ಕೆರಗೋಡಿನ ದಾರಿಯಲ್ಲಿ ಹೊರಟರು. ತಮ್ಮ ತಾಯಿ ತಂದೆಗಳು ತೀರಿ ಕೊಂಡಾಗಲೂ ಕಣ್ಣೀರಿಡದ ಸಿದ್ದಯ್ಯನವರು ಕೆರಗೋಡು ತೋಪಿನಲ್ಲಿ ತಮ್ಮ ನಟವರ್ಗದ ಸ್ಥಿತಿಯನ್ನು ನೆನೆದು ಮಗುವಿನಂತೆ ಅತ್ತರು.

ಕೆರಗೋಡು ಶಂಕರೇಶ್ವರ ಸಿದ್ದಯ್ಯನವರ ನೆರವಿಗೆ ಬಂದನೇನೊ ! ಆ ಊರಿನ ಪಟೇಲರು ಜಾತ್ರೆಯಲ್ಲಿ ನಾಟಕವಾಡುವಂತೆ ಒತ್ತಾಯ ಪಡಿಸಿದರು. ರಂಗಸಜ್ಜಿಕೆ, ವಾದ್ಯವಿಶೇಷಗಳ ಹೊರೆಯನ್ನು ತಾವೇ ಹೊತ್ತರು. ಟಿಕೇಟು ಮಾರಾಟಕ್ಕೂ ತಾವೇ ಕುಳಿತರು. ಮೂರು ದಿನಗಳಲ್ಲಿ ನಾಟಕ ಜನಪ್ರಿಯ ವಾಯಿತು. ಕೈತುಂಬ ಹಣ ಬಂದಿತು. ಕಂಪನಿಯ ಹುಡುಗರೆಲ್ಲ ಹಣವನ್ನು ಹಂಚಿ ಸಿದ್ದಯ್ಯನವರು ಊರನ್ನು ಸೇರಿಕೊಂಡರು. ಮತ್ತೆ ಅಂಥ ಹುಚ್ಚು ಸಾಹಸಕ್ಕೆ ತೊಡಗಲಿಲ್ಲ.

ಊರಿನಲ್ಲಿ ಬೇಸರ. ಬಾಲ್ಯದಲ್ಲಿ ಕಲಿತ ಕರಪಾಲದ ನೆನಪು ಮನಸ್ಸಿನಲ್ಲಿ ಸುಳಿಯತೊಡಗಿತು. ಊರಿನ ಉತ್ಸಾಹಿಗಳು ಕೆಲವರ ಪ್ರಚೋದನೆಯಿಂದ ಸಿದ್ದಯ್ಯನವರು ಕರಪಾಲದ ಕುಲಾವಿಯನ್ನು ಧರಿಸತೊಡಗಿದರು. ಕಾಡ ಸಿದ್ದಮ್ಮ, ಬಸವಕುಮಾರ, ಲೋಹಿತಕುಮಾರ, ನೀಲಕಂಠ ರೂಪಾವತಿ, ಶಿವಯೋಗಿ—ಪರಯೋಗಿ ಕತೆಗಳನ್ನು ಅಭ್ಯಾಸ ಮಾಡಿಕೊಂಡರು. ಸಿದ್ದಯ್ಯ ನವರ ಕತೆ ತಿಪಟೂರು ಸುತ್ತಿನಲ್ಲಿ ಜನಜನಿತವಾಯಿತು. ತಿಪಟೂರು ಅರಸೀಕೆರೆ ಗಳ ಗಣೇಶೋತ್ಸವಗಳಲ್ಲಿ ಸಿದ್ದಯ್ಯನವರ ಕರಪಾಲ ಮೇಳವನ್ನು ಸಹಸ್ರಾರು ಜನ ನೋಡಿದರು.

ಇದ್ದ ಒಬ್ಬಳೇ ಮಗಳ ಗಂಡ ತೀರಿಕೊಂಡ. ಮತ್ತೆ ಹಳ್ಳಿಯಲ್ಲಿ ಸಿದ್ದಯ್ಯ ನವರೂ ಒಬ್ಬರೇ ಇದ್ದರು. ಮಗಳು ಮೊಮ್ಮಕ್ಕಳ ಪೋಷಣೆಯ ಹೊರೆ ಅವರ ದಾಯಿತು. ಅರಸೀಕೆರೆಯ ಸಮೀಪದ ಹಬ್ಬನ ಘಟ್ಟಕ್ಕೆ ಬಂದು ನೆಲಸಿದರು.

ಸಿದ್ದಯ್ಯನವರ ಕರಪಾಲ ಮೇಳ ಒಂದು ಹಳ್ಳಿಗಾಡಿನ ಕಲೆ. ಹಣ ಕ್ಕಾಗಿ ಎಂದೂ ಆ ಕಲೆಯನ್ನು ಅವರು ಉಳಿಸಿಕೊಂಡು ಬಂದವರಲ್ಲ. ಎಷ್ಟೇ ಮೈಲಿಗಳಿಂದ ಕರಪಾಲಕ್ಕಾಗಿ ಕರೆ ಬಂದರೂ ಕಾಲುನಡಗೆಯಲ್ಲಿ ಶಿಷ್ಯರನ್ನು ಕಟ್ಟಿಕೊಂಡು ಹೋಗುತ್ತಾರೆ. ಹಬ್ಬನ ಘಟ್ಟದಿಂದ ಕೊನೆಯ ಹಳ್ಳಿಗೆ ಈಗಲೂ ನಡೆದುಕೊಂಡೇ ಅವರು ಬರುತ್ತಾರೆ. ಅಯ್ಯನವರು ಬಂದರೆಂದರೆ ಜನರ ಒಂದು ಸಣ್ಣಗುಂಪು ಸೇರಲೇ ಬೇಕು. ಇವರಿಂದ ಕತೆಗಳನ್ನು ಹೇಳಿಸುವುದು, ಕೇಳು ವುದು ಅವರಿಗೊಂದು ಮೋಜು. ಸಹಜ ಹಾಸ್ಯಪ್ರಿಯವಾದ ಸಿದ್ದಯ್ಯನವರು ಸ್ನೇಹ ಜೀವಿಯೂ ಹೌದು. ಕಷ್ಟ ಪರಂಪರೆಗಳ ದಾಡೆಯಲ್ಲಿಯೂ ಅವರ ಕಲೆ ಅವರನ್ನು ರಕ್ಷಿಸದೆ, ಬಡತನದ ಬವಣೆಯಲ್ಲೂ ಅವರು ಸಂತೃಪ್ತರು, ಹೃದಯ ಶ್ರೀಮಂತರು!

# ಹಾಡು ಕರೆದ ಹಾದಿಯಲ್ಲಿ

೧

ಜನಪದ ಕಲಾವಿದರು ಕಣ್ಣಿಗೆಬಿದ್ದರೆ, ನಮ್ಮ ಮಾತಿಗೆ ಅವರು ಒಲಿದರೆ, ಅವರು ಒಲಿಯುವಂತೆ ನಾವು ವರ್ತಿಸಿದರೆ ಗೋವಿನ ಕೆಚ್ಚಲಿಗೆ ಕೈ ಹಚ್ಚಿದಂತೆ. ಕೆಚ್ಚಲಲ್ಲಿ ತುಂಬಿ ತುಡಿಯುವ ಹಾಲು ಕರುವಿನ ಬಾಯಿಗೆ ಹರಿದಾಗಲೇ ಗೋವಿಗೆ ನೆಮ್ಮದಿ! ಜನಪದ ಕಲಾವಿದ ತನ್ನ ಕಲೆಯನ್ನು, ಸಾಹಿತ್ಯವನ್ನು ನಾಲ್ಕು ಜನರ ಎದುರು ತೋಡಿಕೊಳ್ಳುವ ಹಂಬಲದಿಂದಲೇ ಕೂಡಿದವನು ಆದರೆ ಕೆಲವೊಮ್ಮೆ, ಯಾವುದೋ ಸಂಪ್ರದಾಯಕ್ಕೆ ಕಟ್ಟುಬಿದ್ದು, ಸಂಶಯ, ಸಂಕೋಚಗಳಿಗೆ ಬಲಿಬಿದ್ದು ತನ್ನನ್ನು ಅರಸಿಬಂದ ಆರಾಧಕನೊಬ್ಬನನ್ನು ತಿರಸ್ಕರಿಸಿ ಬಿಡುತ್ತಾನೆ! ನಿರಾಶೆಯ ಮಬ್ಬಿನಲ್ಲಿ ದೂರದಿಂದ ಬಂದ ಸಂಗ್ರಾಹಕ ದಾರಿಗೆಟ್ಟು ಅಲೆಯುತ್ತಾನೆ !

ಜುಂಜಪ್ಪನ ಕಾಣಿಕೆಯವರು ಬಯಲುಸೀಮೆಯ ಕೆಲವು ಭಾಗದಲ್ಲಿ ಗಣೆಯನ್ನು ಹಿಡಿದು ಬರುತ್ತಾರೆ. ಹೆಗಲಲ್ಲಿ ಉದ್ದವಾದ ಗಣೆಯನ್ನು ಹೊತ್ತು ಯಾರ ಮನೆಯ ಬಾಗಿಲನ್ನೂ ಭಿಕ್ಷೆಗಾಗಿ ತುಳಿಯದೆ ಬೀದಿಯಲ್ಲಿ ಠೀವಿಯಿಂದ ನಡೆದು ಹೋಗುತ್ತಾರೆ. ಆಗ ಎಣ್ಣೆಯ ಗಡಿಗೆಯ ಕಾಣಿಕೆಗಳನ್ನು ಅರ್ಪಿಸುವುದು ನಮ್ಮ ಕರ್ತವ್ಯ. ಊರಿನಲ್ಲಿ, ಹೊಲ, ಬಯಲಲ್ಲಿ ಹಾವು ಚೇಳು ಕಾಣಿಸಿಕೊಂಡಾಗ ಜುಂಜಪ್ಪನನ್ನು ನೆನೆದು ಒಂದು ಹಣವನ್ನು ಎಣ್ಣೆಯ ಗಡಿಗೆಗೆ ಹಾಕುವ ವಾಡಿಕೆ ನಮ್ಮ ಕಡೆ ಈಗಲೂ ಇದೆ. ಜುಂಜಪ್ಪ ಯಾರೋ, ಈ ಹಾವು ಚೇಳುಗಳಿಗೂ ಅವನಿಗೂ ಯಾವ ಸಂಬಂಧವೋ! ಯಾರಿಗೂ ತಿಳಿಯದು. ಜುಂಜಪ್ಪನ ಕಾಣಿಕೆಯವರು ಎಂದೋ ಒಂದು ದಿನ ಬರುತ್ತಾರೆ. ಹಣವನ್ನು ಅರ್ಪಿಸಿದರೆ ನಮ್ಮ ಪಾಲಿನ ಕೆಲಸ ಮುಗಿಯಿತು. ಹಾವು ಚೇಳುಗಳಿಂದ ಆ ಮಹಾಮಹಿಮ ರಕ್ಷಿಸುತ್ತಾನೆ ಎಂಬುದು ನಮ್ಮ ಹಳ್ಳಿಯ ಗರತಿಯರ ನಂಬಿಕೆ. ಕಾಡುಗೊಲ್ಲರ ಕುಲದೈವ ಜುಂಜಪ್ಪನ ಕತೆಯನ್ನು ಈ ಗಣೆಯವರು ಹಾಡುತ್ತಾರೆಂದು ಎಲ್ಲಿಯೋ ಕೇಳಿದ ನೆನಪು. ಜನಪದ ಸಾಹಿತ್ಯ ಹಚ್ಚಹಸಿರಾಗಿ ಉಳಿದಿರುವ ಗೊಲ್ಲ ಜನಾಂಗದ

ಹಾಡ್ಗಬ್ಬಗಳು ಮತಸಂಬಂಧವಾದ ಪುರಾಣಗಳೂ ಹೌದು. ಜುಂಜಪ್ಪನ ಕತೆ ಅಂಥ ಮಹತ್ವದ ಕೃತಿಯೆಂದು ಕೇಳಿ ತಿಳಿದಿದ್ದ ಮನಸ್ಸು ಹೋದೆಡೆಯಲ್ಲೆಲ್ಲ ಗಣೆಯವರನ್ನು ಅರಸುತ್ತಿತ್ತು. ಆದರೆ ಊರೂರ ಮೇಲೆ ಸಾರಿಕೊಂಡು ಅವರು ಬರುವುದು ಎಂದೋ ! ಬಂದರೂ ಗಣೆಯನ್ನು ಹಿಡಿದವರಿಗೆಲ್ಲ ಕತೆ ಬರುತ್ತದೆಂದು ಹೇಳಲೂ ಆಗದು. ಒಂದೆರಡು ವರ್ಷಗಳು ಹೀಗೆಯೇ ಉರುಳಿಹೋದವು.

ಮೂರು ವರ್ಷಗಳ ಹಿಂದೆ ತಿಪಟೂರು ಹಾದಿಯಲ್ಲಿ ಜುಂಜಪ್ಪನ ಗಣೆಯ ಗೊಲ್ಲಗೌಡನೊಬ್ಬ ಕಾಣಿಸಿಕೊಂಡು ಹಿಂದಿನ ಆಸೆಯನ್ನು ಮತ್ತೆ ಕೆರಳಿಸಿದ. ತುರುವೇಕೆರೆಯ ಬಸ್‌ನಿಲ್ದಾಣದಲ್ಲಿ ಅಂಗಡಿಯ ಸಾಲುಗಳ ಮುಂದೆ ಅತ್ತಿತ್ತ ಕಣ್ಣಾಡಿಸುವಾಗ ತೆಂಕಣ ಪೇಟೆಯ ಸಾಲಿನಲ್ಲಿ ಹೆಗಲಲ್ಲಿ ಬಣ್ಣಬಣ್ಣದ ವಸ್ತ್ರವನ್ನು ಸುತ್ತಿದ ಗಣೆಯನ್ನು ಹೊತ್ತ ವ್ಯಕ್ತಿಯೊಬ್ಬ ಹಾದು ಹೋದಂತಾಯಿತು. ಆತ್ಮೀಯ ಬಂಧುವೊಬ್ಬನು ಎಷ್ಟೋ ವರ್ಷಗಳ ಅನಂತರ ಅನಿರೀಕ್ಷಿತವಾಗಿ ಕಣ್ಣಿಗೆ ಬಿದ್ದಂತಾಯಿತು! ಬಸ್ಸು ಹೊರಡಲು ಅನುವಾಗುತ್ತಿದ್ದರೂ ಕೆಳಗಿಳಿದು ಜನ ಜಂಗುಳಿಯ ನಡುವೆ ಆ ಗಣೆಯವನನ್ನು ಹುಡುಕುತ್ತ ಧಾವಿಸಿದೆ. ಕೈಯಲ್ಲಿ ಕ್ಯಾಮರವಿಲ್ಲ, ಟಿಪ್ಪಣಿ ಪುಸ್ತಕವೂ ಇಲ್ಲ. ಜುಂಜಪ್ಪನ ಕತೆ ದೊರೆತರೆ ಅಂದು ಅಲ್ಲಿಯೇ ಉಳಿದು ಬಿಡುವ ನಿರ್ಧಾರದತ್ತಲೂ ಮನಸ್ಸು ಮೆಲುಕು ಹಾಕತೊಡಗಿತು!

ಅಂಗಡಿಯೊಂದರ ಮುಂದೆ ಒಳ್ಳೆಯ ಉಡುಪನ್ನೇ ಧರಿಸಿದ ಗಣೆಯ ಗೌಡ ಕಣ್ಣಿಗೆ ಬಿದ್ದ. ಹತ್ತಿರ ಹೋಗಿ ನಿಂತ ಪಟ್ಟಣಿಗನಂತಿದ್ದ ನನ್ನನ್ನು ಕಂಡು ಅವನೇನೂ ಅಚ್ಚರಿಯನ್ನು ವ್ಯಕ್ತ ಪಡಿಸಲಿಲ್ಲ. ಆದರೆ ಸಮೀಪವೇ ನಿಂತು "ನಿಮ್ಮ ಹೆಸರೇನು ?" ಎಂದಾಗ, "ಯಾಕೆ ಸ್ವಾಮಿ ?" ಎಂದು ನನ್ನತ್ತ ತಿರುಗಿದ.

" ಏನೋ ಆ ಜುಂಜಪ್ಪ ಕೊಟ್ಟ ಒಂದು ಹೆಸರು, ನೀವು ಕೇಳಬಾರದು " ಎಂದು ಒಂದು ಹೆಜ್ಜೆ ಮುಂದೆ ಸರಿದಾಗ ವಿನಯದಿಂದ ತಡೆದು ನಿಲ್ಲಿಸಬೇಕಾಯಿತು. ವಿಚಿತ್ರ ವೇಷಧಾರಿ ಗೊಲ್ಲಗೌಡನೊಡನೆ ನವನಾಗರಿಕವ್ಯ

ಯೊಬ್ಬನು ಮಾತಾಡುತ್ತಿರುವುದನ್ನು ನೋಡಿ ನಾಲ್ಕು ಜನ ಕುತೂಹಲದಿಂದ ನೋಡುತ್ತ ಸಾಗಿದರು.

"ನಿಮ್ಮ ಸ್ಥಳ ಯಾವುದು ಯಜಮಾನರೆ ?" ಎಂದು ಕೇಳಿದೆ. ಗೊಲ್ಲ ಗೌಡ ಹೆಮ್ಮೆಯಿಂದಲೇ ನುಡಿದ.

"ನನ್ನದು ಹಾಗಲವಾಡಿ!"

"ಹಾಗಲವಾಡಿ ಜುಂಜಪ್ಪನ ಸ್ಥಳವಲ್ಲವೆ ?" .

"ಅಲ್ಲ ಅಂದವರು ಯಾರು ?"

ಗೌಡನ ಉಪೇಕ್ಷೆಯ ಉತ್ತರಗಳಿಗೆ ಮನಸ್ಸು ರೋಸಿತು. ಆದರೂ ಹಿಂಬಾಲಿಸಿ ಹತ್ತು ಹೆಜ್ಜೆ ಮುಂದೆ ನಡೆದೆ.

"ಜುಂಜಪ್ಪನ ಕತೆ ಬರುತ್ತದೆಯೇ ?"

ನನ್ನ ಪ್ರಶ್ನೆ ಗೊಲ್ಲಗೌಡನಿಗೆ ಸೋಜಿಗವೆನಿಸಿತು. ಅಂಗಡಿಯೊಂದರ ಕಡೆ ತಿರುಗುತ್ತಿದ್ದವನು ಮತ್ತೆ ನಿಂತ.

"ಕುಲಸ್ವಾಮಿಯ ಕತೆ ಕೇಳುತ್ತಿದ್ದೀರ? ಕತೆ ಬರದೆ ಆ ಸ್ವಾಮಿಯ ಹೆಸರು ಹೇಳಬಹುದೆ ಸ್ವಾಮಿ !" ಎಂದ.

"ಗೌಡರೆ ಆ ಕತೆ ಹೇಳುತ್ತೀರ ನಾನು ಬರೆದುಕೊಳ್ಳಬೇಕಾಗಿದೆ!" ಎಂದು ನಮ್ರನಾಗಿ ಕೇಳಿದೆ.

ಗಣೆಯ ಗೌಡ ಉತ್ತರಿಸಲಿಲ್ಲ ಆ ಮಾತಿಗೆ. ಮತ್ತೆ ಒತ್ತಾಯ ಮಾಡಿದಾಗ ತಾತ್ಸಾರದಿಂದಲೇ ಮಾತನ್ನು ತೇಲಿಸಿದ.

"ಆಗಲಿ ಸ್ವಾಮಿ ಆ ಜುಂಜಪ್ಪನ ಅಪ್ಪಣೆಯಾದರೆ ಹೇಳಿದರಾಯಿತು !"

ಗಣೆಯ ಗೌಡ ಮತ್ತೆ ಅಲ್ಲಿ ನಿಲ್ಲದೆ ನಿರ್ದಯಿಯಾಗಿ ಸಾಗಿಹೋದ. ಪ್ರಾಚೀನ ಸಂಸ್ಕೃತಿಯ ನೆಲೆಯೊಂದು ಹೊಸನಾಗರಿಕತೆಯ ಉರಿಬಿಸಿಲಿಗೆ ಕುಗ್ಗಿ ಕುಗ್ಗಿ ಕಣ್ಮರೆಯಾದಂತೆ ದೂರ ಸರಿದ. ತನ್ನ ಕತೆ, ತನ್ನ ಹಾಡು ಇವರಿಗೊಂದು ಹಾಸ್ಯದ ವಸ್ತು ಎಂದು ಅವನು ಭಾವಿಸಿದಂತಿತ್ತು. ಕೇಳುವ ಜನ, ಮೆಚ್ಚಿ ಕೊಂಡಾಡುವ ಜನ ಬೇಡಿದ್ದರೆ ಅವನು ಕುಳಿತು ಹಾಡುತ್ತಿದ್ದ

ನೇನೋ ! ನನ್ನ ಉಡುಪು ವಯ್ಯಾರದತ್ತ ದೃಷ್ಟಿಯನ್ನು ಹರಿಸಿ ಅವನೊಮ್ಮೆ ವ್ಯಂಗ್ಯವಾಗಿ ನಕ್ಕು ಮುಂದೆ ಸಾಗಿದಂತಾಯಿತು.

ಅತ್ತಿತ್ತ ಸುಳಿದಾಡುತ್ತಿದ್ದ ಜನ, ನನ್ನನ್ನೊಮ್ಮೆ ಕನಿಕರದಿಂದ ನೋಡಿದರು. ಹಿಂಬಾಲಿಸಿ ಹೋಗಲು ನನ್ನ ಸ್ವಾಭಿಮಾನವೂ ಅಡ್ಡಿ ಬಂದಿತು. ಕೈಗೆ ಸಿಕ್ಕಂತೆ ಕಂಡ ಹೂಗೊಂಚಲು ಮತ್ತೆ ಕೈತಪ್ಪಿತು. ಎಷ್ಟೋ ದಿನಗಳಿಗೊಮ್ಮೆ ಕಾಣಿಸಿಕೊಳ್ಳುವ ಗಣೆಯವನು ಹತ್ತಿರ ಬಂದೂ ದೂರ ಸರಿಯುತ್ತಿರುವಾಗ ಅಸಹಾಯಕನಾಗಿ ನಿಂತು ನೋಡುತ್ತಲೇ ಇದ್ದೆ. ನಮ್ಮ ಬಸ್ಸು ತುರುವೇಕೆರೆಯನ್ನು ಬಿಟ್ಟು ಎಷ್ಟೋ ದೂರ ಹೊರಟು ಹೋಗಿತ್ತು ! ಆಚೆಯ ಬೀದಿಯಲ್ಲಿ "ಜುಂಜಪ್ಪನ ಕಾಣಿಕೆ...ಜುಂಜಪ್ಪನ ಕಾಣಿಕೆ," ಎಂದು ಸಾರುತ್ತ ಹೋದ ಗಣೆಯವನ ಧ್ವನಿ ಕ್ರಮೇಣ ಕರಗಿ ಹೋಯಿತು.

ಅನೇಕ ದಿನಗಳು ಉರುಳಿದವು. ಬೇಸಿಗೆಯ ರಜೆಯೊಂದರಲ್ಲಿ ನಮ್ಮೂರಿಗೆ ಹೋದಾಗ ಮತ್ತೆಲ್ಲಿಯೋ ಮಿಂಚು ಹೊಡೆದಂತಾಯಿತು, ನಮ್ಮೂರ ಕೃಷ್ಣಪ್ಪನ ಜಗಲಿಯಲ್ಲಿ ಗಣೆಯ ಗೌಡನೊಬ್ಬನನ್ನು ಕಂಡಾಗ. ದೂರದ ಕನಸು ಹತ್ತಿರ ಹತ್ತಿರ ಸರಿದಂತಾಯಿತು. ಮಹಾಯೋಗಿ ಜುಂಜಪ್ಪನ ಕರುಣೆ ನನ್ನ ಮೇಲುಂಟಾಯಿತೇನೊ ! ನಮ್ಮ ಊರಿಗೆ ಅವನ ಪ್ರತಿನಿಧಿಯನ್ನು ಕಳಿಸಿದ್ದಾನೆ. ಆ ಸ್ವಾಮಿ ನಮ್ಮ ಮನೆಯ ಬಾಗಿಲಿಗೇ ಬಂದಿದ್ದಾನೆ ಎಂದು ಹಿಗ್ಗಿದ ನಾನು ಅತ್ತ ನಡೆದೆ. ಆತನ ಊರನ್ನು ವಿಚಾರಿಸಿದೆ. ಎಲ್ಲರಂತೆ ಅವನೂ "ನನ್ನದು ಹಾಗಲವಾಡಿ" ಎಂದ. ಸ್ವಲ್ಪ ಹೊತ್ತು ಸಲಿಗೆಯಿಂದ ಮಾತನಾಡಿ, ಸ್ನೇಹ ವಾತ್ಸಲ್ಯವನ್ನು ತೋರಿ, "ಜುಂಜಪ್ಪನ ಕತೆ ಯಾರಿಗೂ ಬರುವುದಿಲ್ಲ...ಎಂಥ ಅನ್ಯಾಯ ...ಆ ಸ್ವಾಮಿಯ ಕಥೆಯನ್ನು ಕೇಳಬೇಕು ಎಂದು ಆಸೆ ! ಯಾರೂ ಹೇಳುವುದಿಲ್ಲ. ನೀವೆಲ್ಲ ಆ ಕತೆಯನ್ನು ಕಲಿತುಕೊಳ್ಳಬೇಕು" ಎಂದೆ. ಗಣೆಯವನು ಒಮ್ಮೆ ನನ್ನತ್ತ ವಿಸ್ಮಯದ ದೃಷ್ಟಿಯನ್ನು ಚೆಲ್ಲಿ, "ಅದೇನ್ ಸ್ವಾಮಿ ಹಂಗಂತೀರಿ ! ಜುಂಜಪ್ಪನ ಕತೆ ನನಗೆ ಪೂರ್ತಿ ಬತ್ತದೆ. ಕುಳಿತುಕೊಂಡು ಕೇಳೊರಾದ್ರೆ ಮೂರು ರಾತ್ರಿ ಬೇಕಾದರೂ ಹಾಡ್ತೀನಿ..." ಎಂದನು. ನನ್ನ ಸೋತ

ಕಾಲಿಗೆ ಚೈತನ್ಯ ಬಂದಿತು. ಬಹುದಿನದ ಕನಸು ನನಸಾಗುವ ದಿನ ಹತ್ತಿರವೇ ಆಯಿತು. ಯಾವುದಕ್ಕೂ ಕಾಲ ವಾಗಬೇಕು ಎಂಬ ಮಾತು ನಿಜವಿರಬೇಕು ಎಂದುಕೊಂಡೆ. ಜುಂಜಪ್ಪನ ಕರುಣೆಗೆ ನಾನು ಖಂಡಿತ ಪಾತ್ರನಾದಂತೆ ಭಾವಿಸಿದೆ.

ಗೊಲ್ಲಗೌಡನನ್ನು ಚೆನ್ನಾಗಿಯೇ ಕೊಂಡಾಡಿದೆ. ಇಳಿದುಕೊಂಡಿದ್ದ ಜಗಲಿಯನ್ನು ಬಿಡಿಸಿ ನಮ್ಮ ಮನೆಯತ್ತ ಕರೆದುಕೊಂಡು ಹೋದೆ. ತಾಯಿಯವರು ದೀಪಾಲೆ ಕಂಬವನ್ನು ತಂದು ನಡುಮನೆಯಲ್ಲಿರಿಸಿದರು. ಸಗಣಿ ಉಂಡೆಯನ್ನು ಮಾಡಿ ಅದರ ಮೇಲೆ ಹಾಕಿ ಚೆಂಡು ಹೂವನ್ನು ಮುಡಿಸಿ ಹಣತೆಯನ್ನು ಹಚ್ಚಿದರು. ಅಷ್ಟಗಲ ನೆಲವನ್ನು ಸಾರಿಸಿ ರಂಗವಲ್ಲಿ ಬಿಟ್ಟರು. ಗೊಲ್ಲಗೌಡ ಗಣೆಯನ್ನು ಆ ಸಾರಿಸಿದ ಭಾಗದಲ್ಲಿ ಇರಿಸಿದ. ಗಂಧದ ಕಡ್ಡಿಯನ್ನು ಬೆಳಗಿ ಕಣ್ಮುಚ್ಚಿ ಜುಂಜಪ್ಪನ ಧ್ಯಾನಮಾಡಿ ಕತೆಗೆ ಸಿದ್ಧನಾದ.

ಕೈಯಲ್ಲೊಂದು ಪುಸ್ತಕ, ಲೇಖನಿಯನ್ನು ಹಿಡಿದು ಹತ್ತಿರದಲ್ಲೆ ಕುಳಿತ ನನ್ನತ್ತ ಒಮ್ಮೆ ನೋಡಿದ. ನಾನು ಹಾಡನ್ನು ಬರೆದುಕೊಳ್ಳುತ್ತೇನೆ ಎಂದು ಅವನು ಭಾವಿಸಿರಲಿಲ್ಲವೇನೊ ! ಊರಿನ ಹಿರಿಯರು ನನ್ನ ನೆರವಿಗೆ ಬಂದರು. ನಾನೂ ಸಾಕಷ್ಟು ಸಮಾಧಾನ ಹೇಳಿದೆ. ಸಾಕಷ್ಟು ಹಣದ ಆಸೆಯನ್ನು ತೋರಿದೆ. ಗೊಲ್ಲಗೌಡನ ಮನಕರಗಿತು. ನಡುಮನೆಯ ತುಂಬ ಜನ ಕವಿದರು. ಆ ರಾತ್ರಿ ಆ ಸೊಡರ ಬೆಳಕಿನಲ್ಲಿ ಜುಂಜಪ್ಪನ ಪರಮ ಪವಿತ್ರ ಕಥೆಯ ಪ್ರಥಮ ಸೊಲ್ಲನ್ನು ಕೇಳುವ ಪುಣ್ಯ ಒದಗಿ ಬಂದಿತು; ಹಾಡತೊಡಗಿದ ಗೊಲ್ಲಗೌಡ—

ಶರಣೆಂಬೆ ಶಿವನಿಗೇ ಶರಣೆಂಬೆ ಗುರುವಿಗೆ
ಶರಣೆಂಬೆ ಏಳುಕೋಟಿ ಲಿಂಗ್ಯಕೂss

ಜನಪದ ಗಾಯತ್ರಿ ತ್ರಿಪದಿ ಹೊಸಮಟ್ಟಿನಲ್ಲಿ ಗೊಲ್ಲಗೌಡನ ನಾಲಗೆಯಲ್ಲಿ ಅವತರಿಸತೊಡಗಿತು. ಬಯಲಗಾಳಿಯು ಮೆಲ್ಲುಲಿಯಂತೆ, ಶುಭ್ರ ಶಾಲೀವನದ ಅಲೆಯಲೆಯಂತೆ ಮಂದವಾಗಿ, ಮೋಹಕವಾಗಿ ತೇಲಿ ತೇಲಿ ಬರುವ ನಾದಮಾಧುರ್ಯಕ್ಕೆ ಹಣತೆಯು ಕುಡಿ ತಲೆದೂಗಿತು ! ದಿವ್ಯಶಾಂತಿ

ಯೊಂದು ಎಲ್ಲೆಲ್ಲಿಯೂ ಕವಿಯಿತು. ಆ ನೀರವ ರಾತ್ರಿಯ ಕತ್ತಲೆಯ ತೆರೆಯ ಮೇಲೆ ಮಿಂಚಿನ ರೇಖೆಯಂತೆ ಹರಿಯುತ್ತಿದ್ದ ಹಾಡಿನ ಜಾಡನ್ನು ಹಿಡಿದು ನನ್ನ ಲೇಖನಿ ವೇಗವಾಗಿ ಓಡತೊಡಗಿತು, ಎಲ್ಲಿಯೂ ಎಡಹದೆ! ಹಾಡುತ್ತ ಹಾಡುತ್ತ ಗೊಲ್ಲಗೌಡ ಆವೇಶದಲ್ಲಿ ಮುಳುಗಿ ಹೋದ. ಹಣತೆಯ ಮಂದ ಬೆಳಕಿನಲ್ಲಿ ಅವನ ಮುಖದ ಮೇಲೆ ದಿವ್ಯತೇಜಸ್ಸು ಹರಿದಾಡಿತು. ಪದ್ಮಾಸನ ಹೊಡಿ, ಕಣ್ಣುಜ್ಜಿ ಹಿಂದೆ ಮುಂದೆ ವಾಲುತ್ತ ಜುಂಜಪ್ಪನ ಸುದೀರ್ಘ ಕಥೆಯನ್ನು ರಾತ್ರಿ ಎಷ್ಟೋ ಹೊತ್ತಿನವರೆಗೆ ಹಾಡಿದ! ನನ್ನ ಲೇಖನಿಯ ಕಪ್ಪು ಮುಗಿಯಿತು! ಮತ್ತೊಂದನ್ನು ಮೊದಲೇ ಸಿದ್ಧಗೊಳಿಸಿಕೊಂಡಿದ್ದೆ. ಪುಸ್ತಕದ ಪುಟಗಳು ಮುಗಿದವು, ಇನ್ನೊಂದನ್ನು ಕೈಗೆತ್ತಿಕೊಂಡೆ! ಯಾವುದೋ ಅದ್ಭುತ ರಸಯಾತ್ರೆಯಲ್ಲಿ ನಾನು ಹೊರಟ ಅಪೂರ್ವ ಅನುಭವ ಅದು ನಿಜಕ್ಕೂ ಜುಂಜಪ್ಪನ ಕತೆಯನ್ನು ಕಾಗದದಲ್ಲಿ ಸೆರೆಹಿಡಿಯುವ ಮಹಾಪುಣ್ಯ ರೋಮಾಂಚನವನ್ನು ತರುವಾಗ ಕೈಸೋಲಲಿಲ್ಲ! ನೂರಾರು ವರ್ಷಗಳ ಕಂಠಸ್ಥ ಸಂಪ್ರದಾಯದಲ್ಲಿ ಮುಳುಗಿ, ತೇಲಿ, ಕುಗ್ಗಿ, ಹಿಗ್ಗಿ ಹರಿದುಬಂದ ಹಾಡು ಇಂದು ಒಂದು ಸ್ಥಿರ ರೂಪದಲ್ಲಿ ಉಳಿಯುತ್ತಿದೆ, ಎಲ್ಲಿಯೊ ಗಾಳಿಯಲ್ಲಿ ತೇಲಿ ಹೋಗುತ್ತಿದ್ದ ಜನಪದ ಕಾವ್ಯವೊಂದು ಗ್ರಂಥರೂಪದಲ್ಲಿ ಉಳಿಯುತ್ತಿದೆ ಎಂಬ ಹೆಮ್ಮೆಯ ಪುಳಕ ಅದು! ನಾನು ಎತ್ತ ಎತ್ತಲೋ ಆ ಕತೆಯ ಬೆನ್ನು ಹಿಡಿದು ಸಾಗಿ ಹೋದೆ! ಜನ ಸ್ತಬ್ಧರಾಗಿ ಕುಳಿತಿದ್ದರು. ಮಕ್ಕಳು ಮರಿಗಳೂ ಸದ್ದು ಮಾಡದೆ ಆ ಕತೆಯನ್ನು ಆಲಿಸುತ್ತಿದ್ದರು. ಜುಂಜಪ್ಪನ ಹೆಸರನ್ನು ಎಲ್ಲರೂ ಬಲ್ಲವರೇ ಆಗಿದ್ದರೂ ಮೊದಲಬಾರಿಗೆ ಸಮಗ್ರವಾಗಿ ಕೇಳುವ ಭಾಗ್ಯ ಅವರ ದಾಗಿತ್ತು. ಕಾಡುಗೊಲ್ಲರ ಬದುಕಿನ ಆರಂಭ ಕಾಲದ ಯಾವುದೋ ಪ್ರಾಚೀನ ಕಥೆಯಂತೆ ತೋರಿ ಬಂದು ಅವರ ಪುರಾಣವಾಗಿ ಅವತರಿಸಿದ ಜುಂಜಪ್ಪನ ಕತೆ ಎಲ್ಲರನ್ನೂ ಮುಗ್ಧಗೊಳಿಸಿತು!

ವಿಸ್ತಾರವಾದ ಜುಂಜಪ್ಪನ ಕತೆಯಲ್ಲಿ ಪೂರ್ವಾರ್ಧದ ಕೊನೆಯನ್ನು ಎಟುಕಿಸಿಕೊಳ್ಳುವಲ್ಲಿ ಸಮರಾತ್ರಿ ಕಳೆದುಹೋಯಿತು. ಜುಂಜಪ್ಪನ ಜನನವೇ ಆಗದ ಮುನ್ನ ಪೂಜಾರಿ ಕೆಂಡಪ್ಪ, ಕೆಂಗುರಿ ಮಲ್ಲೇಗೌಡರ ಕತೆ ಯನ್ನು ಒಂದು ಘಟ್ಟಕ್ಕೆ ನಿಲ್ಲಿಸಿ ಕೆಂಪನ ಮಲ್ಲೇಗೌಡನ ಕತೆಯನ್ನು

ಆರಂಭಿಸುವ ಮೊದಲೇ ಗಾಳಿಯ ಪಟದ ಸೂತ್ರ ಹರಿಯಿತು. ತಟ್ಟನೆ ಗೊಲ್ಲಗೌಡ ಕತೆಯನ್ನು ನಿಲ್ಲಿಸಿದ.

"ಇನ್ನು ಎರಡೂವರೆ ರಾತ್ರಿ ಕತೆ ಅದೆ......ನಾಳೀಕ್ಹೇಳ್ತೀನಿ........" ಜುಂಜಯ್ಯನೇಕೋ ಕತೆಯನ್ನಷ್ಟಕ್ಕೇ ನಿಲ್ಲಿಸುವಂತೆ ತೋರಿತು !

ರಾತ್ರಿಯೆಲ್ಲಾ ಕುಳಿತು ಕೇಳುವ ಜನ ನಿರಾಶರಾದರು. ಒಂದು ರಾತ್ರಿಯ ಕತೆಯನ್ನಾದರೂ ಪೂರ್ಣ ಹೇಳಲೆಂಬ ನನ್ನ ಆಶೆಯೂ ಕುಸಿದು ಬಿದ್ದಿತು. ಸೋತ ಗೌಡನನ್ನು ಕತೆ ಮುಂದುವರಿಸುವಂತೆ ಒತ್ತಾಯ ಪಡಿಸಬಾರದೆಂದಿತು ಮನಸ್ಸು. ಅವನ ಮನಸ್ಸು ಪ್ರಸನ್ನವಾಗಿರಬೇಕು ; ಉಲ್ಲಾಸದಿಂದ ಕತೆಯನ್ನು ಹಾಡಬೇಕು.... .. ಎಲ್ಲಿಯಾದರೂ ಕೈಬಿಟ್ಟು ಮುಂದೆ ಸಾಗಿದರೆ ಏನು ಗತಿ ಎನಿಸಿತು ! ಅವನ ಇಚ್ಛೆಗೆ ಇತರರು ಅಡ್ಡಿ ಬಂದರೂ ನಾನು ಒಪ್ಪಿಗೆಯಿತ್ತೆ ! ಜುಂಜಪ್ಪ ಗಣೆಯನ್ನೆತ್ತಿಕೊಂಡು ಮೇಲೆದ್ದ.

ನಮ್ಮ ಮನೆಯಲ್ಲಿ ಅವನಿಗೆ ಮಲಗುವ ಅನುಕೂಲವೂ ಇತ್ತು. ಆದರೆ ಅವನು ತಾನು ತಂಗಿದ ಜಗಲಿಯೇ ಸರಿಯೆಂದು ಅತ್ತ ಸಾಗಿದ. ಅಲ್ಲಿಯವರೆಗೂ ಅವನೊಡನೆ ಹೋಗಿ ಮಲಗಲು ಹೇಳಿ ಮನೆಗೆ ಮರಳಿದೆ.

ಬೆಳಗಿನ ಮಬ್ಬಿನಲ್ಲೇ ತಾಯಿಯವರು ನನ್ನನ್ನು ಕೂಗಿ ಎಳಿಸಿದರು. ರಾತ್ರಿ ತುಂಬ ತಡವಾಗಿ ಮಲಗಿದ ನನಗೆ ಬೇಗ ಎಚ್ಚರವಾಗಿರಲಿಲ್ಲ. ಅಟ್ಟದಿಂದ ಇಳಿದು ಬರುತ್ತಿದ್ದಂತೆಯೇ ನನ್ನ ಕಿವಿಯಲ್ಲೇನೋ ತಾಯಿಯವರು ಉಸುರಿದರು. ಕಾಲಡಿಯ ನೆಲ ಕುಸಿಯಿತು ! ಗಾಬರಿಗೊಂಡ ನಾನು ಕೃಷ್ಣಪ್ಪನ ಜಗಲಿಯತ್ತ ಧಾವಿಸಿ ಬಂದೆ......ಗೊಲ್ಲಗೌಡ ಅಲ್ಲಿರಲಿಲ್ಲ....ಅವನ ಗಂಟು ಗಣೆ ಯಾವುದೂ ಕಾಣಲಿಲ್ಲ. ಯಾರದೋ ಬೈಸಿಕಲ್ಲಿನಲ್ಲಿ ಮೂರು ನಾಲ್ಕು ಮೈಲಿಗಳವರೆಗೂ ಹೋಗಿ ಬಂದರೂ ಸಿಗಲಿಲ್ಲ. ಕಾಣಿಕೆಯನ್ನು ಪಡೆಯದೆ ಬೆಳ್ಳಿ ಮೂಡುವ ಮೊದಲೇ ಗೊಲ್ಲಗೌಡ ಹೊರಟು ಹೋಗಿದ್ದನು ! ಎಲ್ಲಿಗೆ ಹೋದ, ಯಾವ ದಿಕ್ಕಿಗೆ ಹೋದ ಯಾರಿಗೂ ತಿಳಿಯಲಿಲ್ಲ. ಆರಂಭದ ಕಥೆಯಷ್ಟರಲ್ಲೇ ನಮ್ಮನ್ನು ತೃಪ್ತಿಪಡಿಸಿ ಕಣ್ಮರೆಯಾದ... ಜುಂಜಪ್ಪನ ಕಥೆ ಪೂರ್ಣಗೊಳ್ಳಲಿಲ್ಲ !

ಕೆಲವು ತಿಂಗಳುಗಳು ಉರುಳಿಹೋದವು. ಅನೇಕ ಗಣೆಯವರು ಸಂತೆಗಳಲ್ಲಿ, ಜಾತ್ರೆಗಳಲ್ಲಿ ದೊರೆತರು. ನಿಟ್ಟೂರು ಚೌಕದಲ್ಲಿ ಗೊಲ್ಲಗೌಡನೊಬ್ಬನು ನಿಂತು ಛಾಯಾಚಿತ್ರವನ್ನೂ ತೆಗೆಸಿಕೊಂಡ. ಆದರೆ ಕತೆ ಹೇಳಲು ಹಿಂಜರಿದು ಹೋದ. ಅನೇಕ ಹಟ್ಟಿಗಳಲ್ಲಿ ಜುಂಜಪ್ಪನ ಕತೆ ತಿಳಿದವರಿದ್ದರೆಂದು ಅಲ್ಲಿಗೂ ಹೋದೆ. ಅಲ್ಲಿ ನಿರಾಶನಾದ ಮೇಲೆ ಹಾಗಲವಾಡಿಗೇ ಹೋಗಿ ಬರುವ ಕೊನೆಯ ತೀರ್ಮಾನಕ್ಕೆ ಬಂದೆನು.

ಹಾಗಲವಾಡಿ ಜುಂಜಪ್ಪನ ನೆಲೆ. ಶುದ್ಧರೂಪದಲ್ಲಿಯೇ ಕತೆ ಅಲ್ಲಿ ಲಭ್ಯವಾಗುತ್ತದೆ. ಜುಂಜಪ್ಪನ ದರ್ಶನ ಭಾಗ್ಯವೂ ದೊರೆಯುತ್ತದೆ. ತನ್ನ ಕ್ಷೇತ್ರಕ್ಕೆ ಬಂದು ಹೋಗಲಿ ಎಂಬುದು ಜುಂಜಪ್ಪನ ಪ್ರೇರಣೆಯೋ ಏನೋ! ಕೊನೆಗೊಂದು ದಿನ ಕೊನೆಯ ಹಳ್ಳಿಯ ಬಂಧುಗಳೊಬ್ಬರೊಡನೆ ಹಾಗಲವಾಡಿಗೆ ಹೊರಟುದಾಯಿತು!

ನಿಟ್ಟೂರು ಚೌಕದಿಂದ ಹಾಗಲವಾಡಿಗೆ ಹೋಗುವ ಬಸ್ಸನ್ನು ಹತ್ತಿದೆವು. ಚೇಳೂರನ್ನು ದಾಟಿ ಬಸ್ಸು ಕುರುಚಲು ಗಿಡಗಳ ಅರಣ್ಯಮಾರ್ಗವನ್ನು ಹಿಡಿಯಿತು. ಕಣಿವೆಯಿಂದ ಕಣಿವೆಗೆ ಹಸಿರ ತೆರೆ ಹಾದುಹೋಗಿತ್ತು. ಗುಡ್ಡವನ್ನು ಬಳಸಿ, ದಿಣ್ಣೆಯನ್ನು ಸುತ್ತಿ, ಬೆಟ್ಟವನ್ನು ಹತ್ತಿ ಬಸ್ಸು ಸಾಗುವಾಗ ಎತ್ತೆತ್ತಲೂ ಹಸಿರು ಗಿಡಗಳು ಸಕಲಾತಿಯನ್ನು ಹೊದಿಸಿದಂತೆ ಕವಿದುಕೊಂಡಿದ್ದವು. ಎತ್ತರವಾದ ಮರಗಳಿಲ್ಲ, ದಟ್ಟವಾದ ಮೆಳೆ ಕವಿಯದ ಬಯಲುಸೀಮೆಯ ಈ ಕುರುಚಲು ಕಾಡಿನ ಕುಬ್ಜತೆಯಲ್ಲೂ ಒಂದು ಅಪೂರ್ವ ಸೌಂದರ್ಯದ ತೆರೆ ಹಾದುಹೋಗುತ್ತಿತ್ತು, ಬಸ್ಸು ಮುಂದೆ ಸಾಗಿದಂತೆ ಮದಗದ ಗಿರಿಶ್ರೇಣಿಯನ್ನು ಸಮೀಪಿಸಿಕೊಂಡಂತೆ ಗೊಲ್ಲ ಗೌಡರ ಏಳುಗೂಡಿನ ದನಗಳು ಮೇದ ನೆಲಗಳನ್ನೆಲ್ಲ ಗುರುತಿಸಲು ಕಣ್ಣು ಪ್ರಯತ್ನಿಸತೊಡಗಿತು. ಹತ್ತಾರು ಮೈಲಿಗಳ ಪಯಣದ ಆಚೆ, ಬೆಟ್ಟವೊಂದರ ಬೆನ್ನಿನಲ್ಲೇ ನಿಂತಂತೆ ಹಾಗಲವಾಡಿ ಸಿಕ್ಕಾಗ ಸುತ್ತಣ ಗಿರಿಶ್ರೇಣಿಯ ತೆಕ್ಕೆಯಲ್ಲಿ ಪವಡಿಸಿದ ಆ ಊರಿನ ಸೌಭಾಗ್ಯಕ್ಕೆ ಕರುಬುತ್ತ ಬಸ್ಸನ್ನು ಇಳಿದೆವು.

ಹಾಗಲವಾಡಿ ಪುಟ್ಟ ಪಾಳೆಯ ಪಟ್ಟಾಗಿದ್ದಿತು ಎಂಬುದನ್ನು, ಅಲ್ಲಿನ ಕೋಟೆಕೊತ್ತಲಗಳು ಸಾರುತ್ತಿದ್ದವು. ಕಾಡುಗೊಲ್ಲರ ಕುವರ ಜುಂಜಪ್ಪ

ಇಂಥ ಕೋಟಿ ಕೊತ್ತಲಗಳನ್ನು ಕಟ್ಟಿ ಆಳಲಾರ! ನಿಸರ್ಗದ ಮಡಿಲಲ್ಲಿ ಹಟ್ಟಿಗಳನ್ನು ಕಟ್ಟಿ ಗೋವನ್ನು ಕಾಯುವ ಕಾಯಕದಲ್ಲೇ ಬೆಳೆದು ಬಂದ ಜನಾಂಗದ ಅಧಿದೈವ ಇಂಥ ವಿಸ್ತಾರವಾದ ಪಟ್ಟಣವನ್ನು ಕಟ್ಟಿ ಆಳುವುದಾದರೂ ಎಂತು! ಜುಂಜಪ್ಪನ ಕತೆಯಿನ್ನು ಪೂರ್ಣವಾಗಿ ಪರಿಚಿತವಾಗಿಲ್ಲದ ಆ ಸ್ಥಿತಿಯಲ್ಲಿ ಬಸ್ಸನ್ನು ಇಳಿದೊಡನೆಯೇ ಪಕ್ಕದ ಅಂಗಡಿಯೊಂದರಲ್ಲಿ ಕೇಳಿದೆವು:

"ಜುಂಜಪ್ಪನ ದೇವಸ್ಥಾನ ಯಾವ ಕಡೆ ಇದೆ?" ಎಂದು.

"ಜುಂಜಪ್ಪನ ದೇವಸ್ಥಾನ ಎಲ್ಲಿ ಬಂತು ಸ್ವಾಮಿ! ಜುಂಜಪ್ಪನ ಗುಬ್ಬ ಅನ್ನಿ. ಇಲ್ಲಿಗೆ ಮೂರು ಮೈಲಿ ಪಡುವಣಕ್ಕೆ ಹೋಗಬೇಕು. ಅಲ್ಲಿ ಬೆಟ್ಟದ ಬುಡದಲ್ಲೇ ಜುಂಜಪ್ಪನ ಹಟ್ಟಿಯಿದೆ!" ಎಂದು ಅಂಗಡಿಯವನು ಮಾರ್ಗ ದರ್ಶನ ಮಾಡಿದ.

ಜುಂಜಪ್ಪನಿರುವುದು ಹಾಗಲವಾಡಿಯಂಥ ದೊಡ್ಡ ಊರಿನಲ್ಲಲ್ಲ. ಬೆಟ್ಟದ ಬದಿಯ ಹಟ್ಟಿಯಲ್ಲಿ! ಗೊಲ್ಲರ ಹಟ್ಟಿಗಳಾವುವಕ್ಕೂ ಹೆಸರುಗಳು ವಿರಳ! ಜುಂಜಪ್ಪನ ಕ್ಷೇತ್ರಕ್ಕಾದರೂ ಒಂದು ಹೆಸರು ಬೇಡವೆ! ಹಾಗಲವಾಡಿ ಬಹುಮಟ್ಟಿಗೆ ಹೆಸರಾಗಿರುವುದು ಜುಂಜಪ್ಪನಿಂದಲೇ. ಹೆರಗನ ಹಳ್ಳಿಯ ಚಿಕ್ಕಮ್ಮ ಹಾಗಲವಾಡಿಯ ಜುಂಜಯ್ಯನೆಂದೇ ಪದಗಳನ್ನು ಹಾಡುತ್ತಾಳೆ. ಹಾಗಲವಾಡಿಯನ್ನು ನೋಡದ ಬಹುಮಂದಿ ಜುಂಜಪ್ಪನಿರುವುದು ಹಾಗಲವಾಡಿಯೆಂದೇ ಭಾವಿಸುತ್ತಾರೆ. ದೀವಳಿಗೆಯಲ್ಲಿ ನಡೆಯುವ ಜುಂಜಪ್ಪನ ದೀಪ ಹಚ್ಚುವ ಜಾತ್ರೆ ಹಾಗಲವಾಡಿಯ ಜಾತ್ರೆಯೆಂದೇ ಹೆಸರಾಗಿದೆ.

ಹಾಗಲವಾಡಿಯ ಓಣಿಗಳನ್ನು ದಾಟಿ ಪಶ್ಚಿಮಾಭಿಮುಖವಾಗಿ ಸಾಗತೊಡಗಿದೆವು. ಉದ್ದಕ್ಕೂ ಉನ್ನತವಾಗಿ ಹಬ್ಬಿದ ಗಿರಿಶ್ರೇಣಿ ಅನತಿದೂರದಲ್ಲೇ ನಮ್ಮ ದೃಷ್ಟಿಯನ್ನು ಸೆಳೆಯುತ್ತಿತ್ತು. ಹಾಗಲವಾಡಿಯ ಗಿರಿಶ್ರೇಣಿ ಆಚೆಯ ಪಶ್ಚಿಮದ ಗಿರಿಶ್ರೇಣಿಗಳ ನಡುವಣ ಕಣಿವೆಯಲ್ಲಿ ದಟ್ಟವಾಗಿ, ಕವಿದ ತೆಂಗಿನ ತೋಟಗಳು ಪಯಣಿಗರ ಮನಸ್ಸಿಗೆ ಹರ್ಷವನ್ನು ತರುತ್ತವೆ. ಬೆಳೆದ ಹೊಲ

ಗಳನ್ನು ದಾಟಿ ಕ್ರಮಕ್ರಮವಾಗಿ ಹಾಗಲವಾಡಿಯ ತಿಟ್ಟನ್ನು ಇಳಿದು ಕಣಿವೆಯನ್ನು ಪ್ರವೇಶಿಸಿದೆವು. ಮುಂದಿನ ದಾರಿಯೆಲ್ಲ ತೆಂಗಿನ ಚಪ್ಪರದಡಿಯಲ್ಲೆ ಸಾಗುತ್ತದೆ. ಅತ್ತಿತ್ತ ಸಣ್ಣ ಸಣ್ಣ ಹಳ್ಳಗಳಲ್ಲಿ ಜುಳು ಜುಳನೆ ನೀರು ಹರಿಯುತ್ತದೆ, ವಿವಿಧ ಪಕ್ಷಿಗಳು ಒಪ್ಪೆ ಮಾವುಗಳ ತಾಯ ಮಡಿಲಲ್ಲಿ ಸ್ವಪ್ನ ಗೈಯ್ಯುತ್ತವೆ, ಅಲ್ಲಲ್ಲಿಯೋ ನಿಸರ್ಗದ ಮಡಿಲಲ್ಲಿ ಪವಡಿಸಿರುವ ಜುಂಜಪ್ಪನಿಗೆ ಹಾಡಿದ ಜೋಗುಳವೋ ಎನ್ನುವಂತೆ. ತಂಗಾಳಿ ಬೆಟ್ಟದ ಬೆನ್ನಿಗೆ ಮುತ್ತಿಟ್ಟು, ತೆಂಗಿನ ತುಟಿಗೆ ಪುಳಕವನ್ನು ತಂದು ನಮ್ಮ ಮೈಸೋಂಕಿ ನಲವನ್ನು ತರುತ್ತದೆ. ಮೂರು ಮೈಲಿಗಳ ಹಾದಿ ಮೂರು ಗಳಿಗೆಯಲ್ಲಿ ಕಳೆದು ಹೋದಂತೆ ಬೆಟ್ಟದ ಪಾದದಲ್ಲಿ ಹತ್ತಾರು ಗುಡಿಸಲುಗಳ ಸಾಮಾನ್ಯ ಹಟ್ಟಿಯೊಂದು ಗೋಚರಿಸುತ್ತದೆ. ಜುಂಜಪ್ಪನ ಹಟ್ಟಿ ಇನ್ನೇನು ಸಮೀಪವೇ ಆಗಿಹೋಯಿತು! ಪವಿತ್ರ ಕ್ಷೇತ್ರವೊಂದರ ಸಂದರ್ಶನದಿಂದ, ಜುಂಜಪ್ಪನ ಪುಣ್ಯದರ್ಶನದಿಂದ, ಅವನ ಕತೆಯನ್ನು ಹಾಡುವವರ ಪರಿಚಯದಿಂದ ನಮ್ಮ ಪ್ರವಾಸ ಸಾರ್ಥಕತೆಯನ್ನು ಕಾಣುತ್ತದೆ, ಎಂದುಕೊಳ್ಳುವಲ್ಲಿ ಜುಂಜಪ್ಪನ ಗುಬ್ಬದ ಎದುರಿನಲ್ಲೇ ಬಂದು ನಿಂತೆವು!

ಜುಂಜಪ್ಪನ ಗುಬ್ಬ ಎತ್ತರವಾದ ಕಲ್ಲುಕಟ್ಟೆಯ ಮೇಲೆ ನಿಂತಿದೆ. ಅತ್ತಿತ್ತ ಅವನ ಬಳಗದ ಆರು ಗುಬ್ಬಗಳು. ಸುತ್ತಲೂ ಗೊಲ್ಲಗೌಡರ ಗುಡಿಸಲುಗಳು. ಪಕ್ಕದ ಗುಡಿಸಲೊಂದರಿಂದ ಪೂಜಾರಿ ಬೈಲಪ್ಪ ನಮ್ಮೆಡೆಗೆ ಬಂದರು. ನಾಲ್ಕಾರು ಮಂದಿ ಗೊಲ್ಲಗೌಡರೂ ಸೇರಿಕೊಂಡರು. ಗುಬ್ಬದ ಬಾಗಿಲು ತೆಗೆದು ಬೈಲಪ್ಪ ಪೂಜೆಮಾಡಿ ಪ್ರಸಾದವನ್ನು ನೀಡಿದರು ಆ ಕಲ್ಲುಕಟ್ಟೆಯ ಮೇಲೆಯೇ ಕುಳಿತು ಜುಂಜಪ್ಪನ ಬಗ್ಗೆ ಬೈಲಪ್ಪನವರನ್ನು ಪ್ರಶ್ನಿಸತೊಡಗಿದಾಗ ಯಾವ ಸಮರ್ಪಕ ವಿಷಯವೂ ಲಭ್ಯವಾಗಲಿಲ್ಲ. ಬಹುದೂರದ ಹಾಗಲವಾಡಿಯ ಯಾತ್ರೆ ವಿಫಲವಾಗುತ್ತಿದೆಯೋ ಎನಿಸಿತು; ಜುಂಜಪ್ಪನ ಕತೆಯನ್ನು ಸರಿಯಾಗಿ ಅರಿತವರು, ಗದ್ಯದಲ್ಲಾದರೂ ನಿರೂಪಿಸುವವರು ಜುಂಜಪ್ಪನ ಹಟ್ಟಿಯಲ್ಲೂ ಸಿಗಲಿಲ್ಲ ನಮಗೆ. ಅಲ್ಪ ಸ್ವಲ್ಪ ಹಾಡಬಹುದಾಗಿದ್ದ ಹೆಂಗಸರಿಬ್ಬರು ಬಂಧುಗಳ ಊರಿಗೆ ಹೊರಟುಹೋಗಿದ್ದರು ನಮಗೆ ಸರಿಯಾದ ಮಾಹಿತಿಯನ್ನೊದಗಿಸಲಾಗದಿದ್ದುದಕ್ಕೆ ಬೈಲಪ್ಪನವರಿಗೆ ವ್ಯಥೆಯೆನಿಸಿರಬೇಕು. ಪಕ್ಕದವನ

ಜೊತೆ ಏನನ್ನೋ ಮಾತಾಡಿಕೊಂಡು, ನನ್ನತ್ತ ತಿರುಗಿ, "ಇಲ್ಲೊಬ್ಬರು ಯಜಮಾನರಿದ್ದಾರೆ ಬನ್ನಿ...ಸೂರಪ್ಪ ಅಂತ...ಆ ಅಜ್ಜನಿಗೆ ಸ್ವಲ್ಪ ವಿಷಯ ಗೊತ್ತಿದೆ" ಎಂದು ಗುಡಿಸಲೊಂದನ್ನು ತೋರಿಸಿದರು. ಎಲ್ಲರೂ ಎದ್ದು ಅತ್ತ ತೆರಳಿದವು. ಸೂರಪ್ಪನ ಗುಡಿಸಲು ಜುಂಜಪ್ಪನ ಗುಬ್ಬದಿಂದ ಸ್ವಲ್ಪ ದೂರದಲ್ಲಿತ್ತು. ತೊಂಬತ್ತು ವರ್ಷ ವಯಸ್ಸಿನ ವೃದ್ಧ ಹಾಸಿಗೆಯಲ್ಲಿ ಮಲಗಿದ್ದವನು ಅನಾರೋಗ್ಯವಿದ್ದರೂ ಒಳಗೆ ನುಗ್ಗಿ ಬಂದ ನಮ್ಮನ್ನು ನೋಡಿ ಎದ್ದು ಕುಳಿತ. ಚಿಕ್ಕ ಗುಡಿಸಲು. ದನಕಟ್ಟುವ ಗೊತ್ತು ಅಲ್ಲಿಯೇ. ಅಲ್ಲಲ್ಲಿ ಏನೋ ಚುಮುಚುಮು ವಾಸನೆ. ಚರ್ಮವನ್ನು ಹೊದಿಸಿದ ಅಸ್ಥಿಪಂಜರ ಚಡಪಡಿಸಿತು ಹೊಸಬರನ್ನು ಕಂಡು. ಈಚಲು ಚಾಪೆಯೊಂದನ್ನು ತಂದು ಹಾಸಿದ ಹುಡುಗನೊಬ್ಬ ಉಗಿಯುವ ಓಡನ್ನು ಹೊರಗೆ ಎತ್ತಿಕೊಂಡು ಹೋದ. ಎಲ್ಲರೂ ಚಾಪೆಯ ಮೇಲೆ ಕುಳಿತೆವು.

"ಜುಂಜಪ್ಪನ ಕತೆ ನಿಮಗೆ ಗೊತ್ತಿದೆಯಂತೆ...ನಾವು ದೂರದಿಂದ ಬಂದಿದ್ದೇವೆ. ಏನಾದರೂ ಗೊತ್ತಿದ್ದರೆ ಹೇಳಿ!" ನಾನು ಕೂಗಿ ಹೇಳಿದೆ. ಜುಂಜಪ್ಪನ ಹೆಸರನ್ನು ಕೇಳುತ್ತಿದ್ದಂತೆಯೇ ಉತ್ಸಾಹ ಅವನಲ್ಲಿ ತುಳುಕಾಡಿತು. ತೊಂಬತ್ತರ ಹೊಸ್ತಿಲಲ್ಲಿ ಹತ್ತೊಂಬತ್ತರ ಹರೆಯ ಇಣಿಕಿದಂತಾಯಿತು. ತನ್ನ ಬದುಕಿನ ಕೊನೆಗಾಲದಲ್ಲಿ ತನ್ನ ಸ್ವಾಮಿಯ ಕತೆಯ ಪುಣ್ಯ ಸ್ಮರಣೆಯೇ ಅವನಿಗೊಂದು ಆನಂದವನ್ನು ತಂದಂತಿತ್ತು. ಆ ಹಟ್ಟಿಯ ಹಳೆಯ ಹಣತೆ ಎಣ್ಣೆ ಮುಗಿದು ನಂದಿಹೋಗುವ ಮುನ್ನ ಇದ್ದ ಎಣ್ಣೆಯನ್ನೆಲ್ಲ ಹೀರಿಕೊಂಡು ಬೆಳಗಿತು. ಸೋಗೆಯ ತಡಿಕೆಯನ್ನು ಒರಗಿ ಸೊಗಸಾದ ಗದ್ಯದಲ್ಲಿ ಜುಂಜಪ್ಪನ ಕತೆಯನ್ನು ನಿರೂಪಿಸತೊಡಗಿದ. ಮಾತಿಗೆ ಶಕ್ತಿ ಸಾಲದು; ವಾಕ್ಯಗಳು ಕಡಿದು ಹೋಗುತ್ತಿದ್ದವು. ಸನ್ನಿವೇಶಗಳು ಬದಲಾಗುತ್ತಿದ್ದವು, ಹೆಚ್ಚುಹೊತ್ತು ಮಾತಾಡುವ ಚೈತನ್ಯವೂ ಕಂಡು ಬರಲಿಲ್ಲ. ಆದರೂ ಸೂರಪ್ಪ ಕತೆಯನ್ನು ಕೈಬಿಡಲಿಲ್ಲ. ಜುಂಜಪ್ಪನ ಜನನ, ಬಡಮ್ಮೈಲನ ಸಾಹಸ, ಚೀಳೂರ ಪವಾಡ ಮುಂತಾದ ಸನ್ನಿವೇಶಗಳನ್ನು ವಿವರಿಸಿದ. ಜುಂಜಪ್ಪನ ಕಥೆಯ ಸ್ಥೂಲವಾದ ಹಂದರವನ್ನು ಸೂರಪ್ಪನ ಸಾಮಗ್ರಿಯಿಂದ ನಿರ್ಮಿಸತೊಡಗಿದೆ. ಹತ್ತಾರು ನಿಮಿಷ ಮಾತಾಡಿ ಹತ್ತು ಹಲವು ವಿಷಯಗಳನ್ನೇ ಅವನು ಹೇಳಿದ್ದ. ಕಂಠತ್ರಾಣ ಕುಗ್ಗಿರಬೇಕು.

ಕೆಮ್ಮುತ್ತ ಕೆಮ್ಮುತ್ತ ಸೂರಪ್ಪ ಕೆಲಗಳಿಗೆ ಸುಮ್ಮನೆ ಕುಳಿತ. ಕೈಕಾಲುಗಳು ಕಳ್ಳಿಯ ಕಡ್ಡಿಯಾಗಿದ್ದವು, ಎದೆಯ ಚಕ್ಕೆ ಒಡೆದು ತೋರುತ್ತಿತ್ತು. ಕಣ್ಣು ಪಾತಾಳ ಸೇರಿದ್ದವು. ಎದ್ದು ತಿರುಗಾಡುವ ಬಲವೂ ಅವನಲ್ಲಿ ಉಳಿದಿರಲಿಲ್ಲ. ಹಟ್ಟಿಗೊಬ್ಬ ಹಳೆಯ ಮನುಷ್ಯ. ಇಂದೊ ನಾಳೆಯೋ ಕಣ್ಣು ಮುಚ್ಚಿ ಕೊಳ್ಳುತ್ತಾನೆ, ಅವನ ಜೊತೆಯಲ್ಲಿಯೇ ಇವನ ಅಂತರಂಗದಲ್ಲಿ ಅಡಗಿರುವ ಶ್ರೀಮಂತ ಭಂಡಾರವೂ ಮರೆಯಾಗುತ್ತದೆ! ಸೂರಪ್ಪ ಹೇಳಿದ ಯಾವ ಮಾತೂ ಬಿಟ್ಟು ಹೋಗದಂತೆ ಟಿಪ್ಪಣಿ ಮಾಡಿಕೊಂಡೆ!

ಸೂರಪ್ಪನ ಬದಿಯಲ್ಲೊಂದು ಮೂರು ಮೊಳ ಉದ್ದದ ಬಿದಿರು ಕೊಳವೆ ಕಾಣಿಸಿತು. ಹಿತ್ತಾಳೆಯ ಬಳೆಗಳನ್ನು ಹಾಕಿ ಅಲಂಕರಿಸಿದ್ದ ಅದನ್ನು ಸೂರಪ್ಪ ತಲೆಯ ಬಳಿಯಲ್ಲೇ ಇಟ್ಟು ಪೂಜಿಸುತ್ತಿದ್ದ. ಮಡದಿ ಮಕ್ಕಳನ್ನೆಲ್ಲ ಕಳೆದು ಕೊಂಡ ಅವನ ಪಾಲಿಗೆ ಜೀವನದ ಸಂಗಾತಿಯಾಗಿ ಅದೊಂದು ಮಾತ್ರ ಉಳಿ ದಿತ್ತು! ವಿಶಿಷ್ಟ ಆಕಾರದ ದೊಡ್ಡ ಕೊಳವೆ ಸಹಜವಾಗಿ ನನ್ನ ದೃಷ್ಟಿಯನ್ನು ಸೆಳೆಯಿತು.

"ಇದು ನನ್ನ ಗಣೆ . ಬೇಜಾರಾದರೆ ಎದ್ದು ಕುಳಿತು ಊದುತ್ತೇನೆ"

ಸೂರಪ್ಪ ಗಣೆಯ ಕಡೆ ಕೈತೋರಿ ಹೇಳಿದ ನಮ್ಮ ಕುತೂಹಲವನ್ನು ಗಮನಿಸಿ. ನಮ್ಮ ಹಿಂದೆ ಕುಳಿತ ಯಾರೋ "ಸ್ವಲ್ಪ ಊದಿ ತೋರಿಸಜ್ಜ" ಎಂದು ಸನ್ನೆಮಾಡಿದರು. ಸೂರಪ್ಪ ಸೋತಿರಲಿಲ್ಲ. ಅದನ್ನು ಕೈಗೆತ್ತಿಕೊಂಡು, ವಿಶಿಷ್ಟಭಂಗಿಯಲ್ಲಿ ಕುಳಿತು ಗಣೆಯ ಒಂದು ಭಾಗವನ್ನು ತನ್ನ ತುಟಿಗಳಿಗೆ ಒತ್ತಿ ಮತ್ತೊಂದು ತುದಿಯನ್ನು ನೆಲದ ಮೇಲೆ ಕೂರಿಸಿ ಊದತೊಡಗಿದ. ಅವನ ಶರೀ ರಕ್ಕೆ ಮುಪ್ಪಡರಿದ್ದರೂ ಊದುವ ಶಕ್ತಿಗೆ ಮುಪ್ಪು ಬಂದಿರಲಿಲ್ಲ. ಆ ಬಿದಿರ ಕೊಳವೆಯೊಳಗಿನಿಂದ ಆಹ್ಲಾದಕರವಾದ ಮಧುರವಾದ ನಿನಾದವೊಂದು ಹೊರಹೊಮ್ಮತೊಡಗಿತು! ಕೊಳಲ ನಾದವನ್ನೂ ನಾಚಿಸುವ ಗಣೆಯ ನಾದ ಅಲೆಅಲೆಯಾಗಿ ಹಬ್ಬಿ ಗುಡಿಸಲನ್ನು ಮೀರಿ ಹಟ್ಟಿಯೆಲ್ಲ ಹರಡಿ, ಜುಂಜಪ್ಪನ ಸನ್ನಿಧಿಯನ್ನು ಸೇರಿತೇನೊ! ಊದುತ್ತ ಊದುತ್ತ ಸೂರಪ್ಪ ರಸವಶನಾದ. ಗುಡಿಸಲುಗಳಾಚೆ ಮರಗಿಡಗಳ ಕಿವಿಯ ಮೇಲೆ ಹರಿದು, ಕಣಿವೆ ಕಂದರಗಳನ್ನು ದಾಟಿ, ಅಲೆಅಲೆಯಾಗಿ ಹಬ್ಬಿದ್ದ ಹಸಿರ ಪರ್ವತಸ್ತೋಮದ ಮೈಮೇಲೆ ಗಣೆಯ

ನಾದ ಮೈದಡವುವ ತಾಯಿಯ ಕೈಸ್ಪರ್ಶದಂತೆ ತೇಲಿತು. ಯಾವುದೋ ನಾದ ತರಂಗದ ಮೇಲೇರಿ ದಿವ್ಯಯಾತ್ರೆಯ ಮಧುರ ಸ್ವಪ್ನದಲ್ಲಿ ನಾವೂ ತೇಲಿದೆವು. ಹಟ್ಟಿಯ ಮಕ್ಕಳು ಹೆಂಗಸರೆಲ್ಲ ಗುಡಿಸಲ ಬಾಗಿಲಲ್ಲಿ ಕವಿದರು.

ಗಣೆಯನ್ನು ಊದುತ್ತ ಹೋದಂತೆ ದೇವರು ಮೈದುಂಬುವನಂತೆ. ಗೊಲ್ಲ ಗೌಡನಿಗೆ ಗೊಲ್ಲರು ಕಣಿಯನ್ನು ಹೇಳುವುದು ಆ ಅವಸ್ಥೆಯಲ್ಲಿಯೇ. ವಯಸ್ಸಿನ ಭಾರದಿಂದ ಸೂರಪ್ಪನೆಲ್ಲಿ ಕುಸಿದಾನೋ ಎಂದು ಬೈಲಪ್ಪ "ಸಾಕು ಸಾಕು" ಎಂದು ಎಚ್ಚರಿಸಿದರು. ಸೂರಪ್ಪ ಗಣೆಯನ್ನು ಇಳುಹಿ ಬಳಲಿದಂತೆ ಹಾಸಿಗೆಯಲ್ಲಿ ಹಾಗೆಯೇ ಮಲಗಿದ. ಹಟ್ಟಿಯ ಗೋವುಗಳೆಲ್ಲ ಬಳಿಯ ತೋಪಿನ ಕಾವಲಲ್ಲಿ ಮೇವನ್ನು ತೊರೆದು ಕಿವಿಯೆತ್ತಿ ಆಲಿಸಿರಬೇಕು, ವಿಹಗಕುಲ ತನ್ನ ಇಂಚರವನ್ನು ನಿಲ್ಲಿಸಿ ಮೌನಮುದ್ರೆಯಲ್ಲಿ ಮುಳುಗಿರಬೇಕು. ಕಾಲದೇಶಗಳ ಅರಿವು ಕ್ರಮಕ್ರಮವಾಗಿ ನಮ್ಮಿಂದ ಜಾರಿ, ನಂದ ಗೋಕುಲದ ಬೃಂದಾವನದಿಂದ ವೇಣುನಾದ ಒಯ್ಯೊಯ್ಯನೆ ತೇಲ ತೊಡಗಿತು! ಪೂಜಾರಿ ಕೆಂಡಪ್ಪ, ಕೆಂಗುರಿ ಮಲ್ಲೇಗೌಡ, ಕೆಂಪನ ಮಲ್ಲೇಗೌಡ, ಜುಂಜಪ್ಪ, ಮಾರಣ್ಣ, ಮೈಲಣ್ಣರೆಲ್ಲ ಹಟ್ಟಿಯ ಗುಬ್ಬಗಳಲ್ಲಿ ಗಣೆಯ ನಾದದ ರಸ ರೋಮಾಂಚನಕ್ಕೆ ಪಕ್ಕಾಗಿ ತಲೆದೂಗಿದರೇನೊ! ಅಲ್ಲಿ ಮದಗದ ಕಣಿವೆಯಲ್ಲಿ, ಚೇಳೂರ ಕಾವಲಿನಲ್ಲಿ, ಶಿವಗಂಗೆಯ ಸುತ್ತಿನಲ್ಲಿ ಜುಂಜಪ್ಪನ ಏಳುಗೂಡಿನ ದನಗಳು ಅಣ್ಣನ ಗಣೆಯ ನಾದವನ್ನು ಕೇಳುತ್ತ ಕೇಳುತ್ತ ಅವನತ್ತ ಸರಿಯುತ್ತಿವೆ. ಹಿಪ್ಪೆಯ ಮರವೊಂದರ ಬುಡವನ್ನೊರಗಿ ಬಾಲಜುಂಜಯ್ಯ ಊದಿದ್ದಾನೆ ತನ್ನ ಗಣೆಯನ್ನು! ನೆಲ ಮುಗಿಲಲ್ಲಿ ಮಿಂಚಿನ ಸಂಚಾರವಾಗುತ್ತಿದೆ. ಭುವಿಯೆದ್ದು ತೇಲ ತೊಡಗಿದೆ. ಬಿಸಿಲು ಹರಿದು ನೆಳಲ ತೆರೆ ಹಾದುಹೋಗುತ್ತಿದೆ; ಗಗನಂಚರರೆಲ್ಲ ಮೋಡಗಳ ತೇರನ್ನೇರಿ ಅತ್ತ ಸುಳಿದರೇನೊ! ಬೀಸುವ ಗಾಳಿಯೂ, ಹರಿಯುವ ನದಿಯೂ, ಕರೆಯುವ ಕೋಗಿಲೆಯೂ ಅಣ್ಣನ ಗಣೆಯ ನಿನಾದಕ್ಕೆ ಮೈಮರೆತಿವೆ. ಸೂರಪ್ಪ ಆವೇಶದಿಂದ ನಾದ ಸೇತುವನ್ನೇರಿ ಸಾಗಿದ್ದಾನೆ.

ಜುಂಜಪ್ಪನ ಹಟ್ಟಿಯ ಪಯಣ ಹೆಚ್ಚು ನಿರಾಶೆಯನ್ನೇನೂ ತರಲಿಲ್ಲ. ಅರಸಿಹೋಗಿದ್ದ ಜುಂಜಪ್ಪನ ಕತೆ ಪೂರ್ಣವಾಗಿ ಲಭಿಸಲಿಲ್ಲ; ಹಾಡಿನ ರೂಪದಲ್ಲಿ

ದೊರೆಯಲಿಲ್ಲ. ಆದರೇನು ಜುಂಜಪ್ಪನ ದರ್ಶನದಿಂದ ಪುಳಕಿತರಾದೆವು; ಸೂರಪ್ಪನ ಗಣೆಯ ನಾದದಿಂದಲೂ ಆನಂದತುಂದಿಲರಾದೆವು; ಜುಂಜಪ್ಪನೂ ಮದಗದ ಗಿರಿಯ ನೆತ್ತಿಯ ಮೇಲೆ ನಿಂತು ತನ್ನ ಚಿನ್ನದ ಗಣೆಯನ್ನು ಆಗೊಮ್ಮೆ ಊದಿದ್ದನಂತೆ! ಅವನ ನೆಚ್ಚಿನ ಹೋರಿ ಬಡವೈಲ ಚೀಳೂರ ಪಾಳೆಯಗಾರರ ಉಕ್ಕಿನ ಸರಪಣಿಯನ್ನು ಹರಿದು ಕೋಟೆಯನ್ನು ಹಾರಿ ತನ್ನ ಸ್ವಾಮಿಯ ಬಳಿಗೆ ಹಾರಿಬಂದಿದ್ದನಂತೆ! ಗೊಲ್ಲರ ಪಾಲಿಗೆ ದೊಡ್ಡ ಕೊಳಲಿನಾಕಾರದ ಗಣೆ ಒಂದು ಪವಿತ್ರ ವಸ್ತು. ಜುಂಜಪ್ಪನ ನೆನಪನ್ನು ತರುವ ಒಂದು ಶ್ರೇಷ್ಠ ಸಾಧನ!

ಬೆಟ್ಟಗುಡ್ಡಗಳ ನಡುವೆ, ಕಣಿವೆ ಕಾಡುಗಳಲ್ಲಿ ಹಟ್ಟಿಗಳನ್ನು ಕಟ್ಟಿ ದನ ಕರುಗಳನ್ನು ಕಾದು, ನಿಸರ್ಗದ ಮಕ್ಕಳಾಗಿ ಬದುಕನ್ನು ನೀಗುವ ಗೊಲ್ಲರ ಜೀವನದ ರೀತಿ ಜುಂಜಪ್ಪನ ಕಾಲದಲ್ಲೆಂತೋ ಈಗಲೂ ಹಾಗೆಯೇ ಇದೆ. ತಮ್ಮ ಸಂಸ್ಕೃತಿಯನ್ನು, ತಮ್ಮ ಮತೀಯ ನಂಬಿಕೆಗಳನ್ನು ಅತ್ಯಂತ ನಿಷ್ಠೆಯಿಂದ ಪ್ರಾಮಾಣಿಕತೆಯಿಂದ ಅವರು ಕಾಪಾಡಿಕೊಂಡು ಬಂದಿದ್ದಾರೆ! ಜುಂಜಪ್ಪನ ಕತೆಯಲ್ಲಿ ಬರುವ ನೀತಿ ನಿಯಮಗಳಾವುವನ್ನೂ ಅವರು ತಪ್ಪಿ ನಡೆಯರು! ಅಂಥ ಶ್ರದ್ಧೆ, ಅಂಥ ಕಟ್ಟುಪಾಡು ಅವರದು!

೨

ಕೊನೆಯ ಹಳ್ಳಿಯ ಬಂಧುಗಳ ಮನೆಯಲ್ಲಿ ನಾವೊಮ್ಮೆ ಧ್ವನಿಮುದ್ರಣದ ಬಿಡಾರ ಮಾಡಬೇಕಾಗಿ ಬಂದಿತು. ಆ ಸುತ್ತಿನ ಹಾಡುಗಾರ್ತಿಯರು, ಹಾಡುಗಾರರೆಲ್ಲ ಅಲ್ಲಿ ನೆರೆದಿದ್ದರು. ಎರಡು ಮೂರು ದಿನ ಹಗಲೆನ್ನದೆ, ರಾತ್ರಿಯೆನ್ನದೆ ಧ್ವನಿಮುದ್ರಣ ಅವ್ಯಾಹತವಾಗಿ ನಡೆಯಿತು. ಶಂಕರಮಠದ ಎದುರಿನ ಪ್ರತ್ಯೇಕ ಮನೆಯೊಂದರಲ್ಲಿ, ಜನಸಂಪರ್ಕದಿಂದ ದೂರವಾದ ನೆಲೆಯಲ್ಲಿ ನಮ್ಮ ಧ್ವನಿಮುದ್ರಣ ಕಾರ್ಯ ಸಾಗಿತ್ತು. ಕುತೂಹಲ ವಿಹ್ವಲರಾದ ಅನೇಕರು ಹೊರಗೆ ನಿಂತು, ಒಳಗೆ ಕುಳಿತು ಹಾಡುವುದನ್ನು ಕೇಳುತ್ತಿದ್ದರು. ಏಕೋ ಹೊರಗೆ

ಎದ್ದು ಬಂದ ನನ್ನನ್ನು ಕಂಡು ನಡುಪ್ರಾಯದ ವ್ಯಕ್ತಿಯೊಬ್ಬ ಕೈಮುಗಿದ. ನಾನೂ ಕೈಮುಗಿದು "ಏನಪ್ಪ?" ಎಂದೆ.

"ನಮ್ಮ ಹಟ್ಟೀಲು ಪದ ಹೇಳೋರವ್ರೆ...ಬೇಕಾದ್ರೆ ಕರ್ಕೊಂಬರ್ತೀನಿ" ಎಂದನಾತ. "ಹಟ್ಟಿ" ಎಂದಾಗ ನನ್ನ ಕಿವಿ ಅರಳಿತು. "ಹೆಂಗಸರೋ! ಗಂಡಸರೋ?" ಎಂದೆ.

"ಹೆಂಗಸರೂ ಅವರೆ, ಗಂಡಸ್ರೂ ಅವ್ರೆ. ಯಾರನ್ನ ಬೇಕಾದರೂ ಕರ್ಕೊಂಡುಬತ್ತೀನಿ ಏನೂ ಕೊಡಬೇಡಿ...ಅವರ ಹಾಡ್ನ ಮಿಸೀನಿನಲ್ಲಿ ಹಿಡಿಕೊಳ್ಳಿ" ಎಂದನಾತ.

"ನೀವು ಗೊಲ್ಲರೆ?" ನಾನು ಮತ್ತೆ ಕೇಳಿದೆ.

"ಹೌದು ಸ್ವಾಮಿ ಶಿವಪುರದ ಹಟ್ಟಿ ನಮ್ಮದು, ಇಲ್ಲಿಗೆ ಎರಡು ಮೈಲಿ ಆಯ್ತದೆ" ಎಂದನಾತ.

"ನಿಮ್ಮ ಹಟ್ಟೀಲಿ ಜುಂಜಪ್ಪನ ಮೇಲೆ ಪದ ಹೇಳೋರು ಯಾರಾದರೂ ಅವರ?" ನಾನು ಹಳೆಯ ಪ್ರಶ್ನೆಯನ್ನು ಬತ್ತಳಿಕೆಯಿಂದ ಈಚೆ ತೆಗೆದೆ.

"ಒಬ್ಬ ಅವನೆ ಸ್ವಾಮಿ ಸೂರಪ್ಪ ಅಂತ...ಬೇಕಾದರೆ ಅವನ್ನೂ ಕರ್ಕೊಂಬತ್ತೀನಿ"

ಕೊನೆಯ ಹಳ್ಳಿಯ ಸುತ್ತನ್ನೆಲ್ಲ ಶೋಧಿಸಿದ ನನಗೆ ಜುಂಜಪ್ಪನ ಕತೆ ಇದೆ ಎಂದಾಗ ನಂಬಲು ದುಸ್ತರವಾಯಿತು. ಹಾಗಲವಾಡಿಯಿಂದ ನಿರಾಶನಾಗಿ ಹಿಂದಿರುಗಿ, ಪರಿಚಿತ ನೆಲೆಯೊಂದರಲ್ಲಿಯೇ ಜುಂಜಪ್ಪನ ಕತೆಗಾರನಿದ್ದಾನೆ ಎಂದು ತಿಳಿದಾಗ ಆಶ್ಚರ್ಯವೂ ಆಯಿತು.

"ಸಾಯಂಕಾಲ ಕರ್ಕೊಂಡ್ಬಾ ನೋಡೋಣ" ಎಂದೆ. ಆತ ಹೊರಟು ಹೋದ.

ರಾತ್ರಿ ಒಂಬತ್ತರ ಸಮಯವಿರಬಹುದು. ಆಗತಾನೆ ಕೊನೆಯ ಟೇಪು ಕೆಂಚಮ್ಮನ ಹಾಡನ್ನು ಹೀರಿಕೊಳ್ಳುತ್ತಿತ್ತು. ಮರುದಿನ ಮೈಸೂರಿಗೆ ಮರಳಬೇಕು; ಅದಕ್ಕಾಗಿ ಉಳಿದವರನ್ನೆಲ್ಲಾ ಕರೆಸಿ ಹಾಡಿಸಿಯಾಗಿತ್ತು. ಇನ್ನೇನು ಮೇಲೇಳಬೇಕೆನ್ನುವ ವೇಳೆಗೆ ಮುವತ್ತು ನಲವತ್ತು ಜನರ ದೊಡ್ಡ

ತಂಡವೊಂದು ಧ್ವನಿಮುದ್ರಣವಾಗುತ್ತಿದ್ದ ಗೃಹದ ಬಾಗಿಲಲ್ಲಿ ಕವಿಯಿತು. ರಾತ್ರಿಯಲ್ಲಿ ಇದ್ದಕ್ಕಿದ್ದಂತೆಯೇ ಕಾಣಸಿಕೊಂಡ ದೊಡ್ಡ ಗುಂಪನ್ನು ನೋಡಿ ನಾನು ಬೆದರಿದೆ! ಆದರೆ ಅದು ಪುಂಡರ ಗುಂಪಲ್ಲ; ಹೆಂಗಸರು, ಮಕ್ಕಳು, ಮುದುಕರು ಎಲ್ಲರೂ ಇದ್ದ ಶಿವಪುರದ ಹಟ್ಟಿಯ ಸಮಸ್ತ ಜನರ ಪರಿವಾರ.

ಧ್ವನಿಮುದ್ರಣ ಯಂತ್ರದ ಸುದ್ದಿ ಆ ಸುತ್ತಿಗೆಲ್ಲಾ ಹರಡಿತ್ತು. "ಅದೇನೋ ಯಂತ್ರ, ಹಾಡಿದ ಹಾಡನ್ನು ಹಾಡಿದಂತೆಯೇ, ಹಿಂದಿರುಗಿಸುತ್ತದೆ" ಎಂದು ಕುತೂಹಲಗೊಂಡ ಜನ ಅದನ್ನು ನೋಡಲಾಗಿಯೇ ಬಂದವರು. ಜೊತೆಗೆ ಶಿವಪುರದ ಹಟ್ಟಿಯ ಸೂರಪ್ಪನೂ ಗುಂಪಿನಲ್ಲಿ ಕಾಣಿಸಿಕೊಂಡ. ಊಟಕ್ಕೆ ಹೊರಟಿದ್ದ ನಾನು ನಿಂತು ಪ್ರಶ್ನಿಸಿದೆ, ಜುಂಜಪ್ಪನ ಕತೆಯ ಬಗ್ಗೆ. ಸೂರಪ್ಪ "ಚ-ಚ-ಚ-ಚ ಚನ್ನಾಗೆ ಬತ್ತದೆ....ಹೆ-ಹೆ-ಹೆ ಹೇಳ್ತೀನಿ!" ಎಂದು ತೊದಲುತ್ತಲೇ ನುಡಿದ. ಇದೇನೋ ತಮಾಷೆಯಾಯಿತೆಂದು ಭಾವಿಸಿದ ನಾನು ಕ್ಷಣ ಖಿನ್ನನಾದೆ. ದೊಡ್ಡ ಜಾತ್ರೆಯೇ ಇವನೊಡನೆ ಬಂದಿದೆ, ನಾಗರಿಕನಂತೆ ಮುಂಜುಟ್ಟು ಬಿಟ್ಟಿದ್ದಾನೆ, ಸೂರಪ್ಪ! ಬಿಳಿಯ ಅಂಗಿ, ಶುಭ್ರವಾದ ಬಿಳಿಯ ಪಂಚೆ! ಜೊತೆಗೆ ಮಾತಾಡಲೂ ಬರದೆ ತೊದಲುತ್ತಾನೆ. ಜುಂಜಪ್ಪನ ಕತೆ ಎಂದರೇನು; ಈ ಆಧುನಿಕ ಹಳ್ಳಿಯ ರೈತನೆಂದರೇನು ಎಂದು ಹಿಂದೆಗೆಯುತ್ತಿದ್ದಾಗ, ಗುಂಪಿನ ಮುಂದಾಳು ಕಾಣಿಸಿಕೊಂಡು ಒತ್ತಾಯಮಾಡಿದ–

"ಹೇಳಿಸಿನೋಡಿ ಸ್ವಾಮಿ ಅದ್ಕೇನಂತೆ!'' ಎಂದು. ಅಷ್ಟು ದೂರದಿಂದ ಬಂದ ಅವರನ್ನು ನಿರಾಶೆಗೊಳಿಸುವುದು ನನಗೂ ಹಿತವೆನಿಸಲಿಲ್ಲ. ಅಷ್ಟು ಮಂದಿಯನ್ನೂ ಅಲ್ಲಿಯೇ ಕೂರಿಸಿ ಊಟಮುಗಿಸಿ ಬಂದೆ.

ನಾನು ಬರುವುದರಲ್ಲಿ ಸೂರಪ್ಪ ಗಂಧದಕಡ್ಡಿಯ ಕಟ್ಟೊಂದನ್ನು ತರಿಸಿ ಹಚ್ಚಿದ್ದ. ಪುರಿಯನ್ನು ತಂದು ಎಲ್ಲರಿಗೂ ಹಂಚಿದ್ದ. ದೊಡ್ಡ ಮನೆಯ ತುಂಬ ಸೂರಪ್ಪನ ಪರಿವಾರ ಕಲೆಯಿತು. ಹಾಡಲು ಸಿದ್ಧನಾಗಿ ಸೂರಪ್ಪ ಕುಳಿತ. ದನಿಕೊಡಲು ಜೊತೆಗೊಬ್ಬನನ್ನು ಕರೆದುಕೊಂಡ.

ಮೂರುದಿನಗಳ ಅವ್ಯಾಹತ ಸಂಗ್ರಹದಿಂದ ಬಳಲಿದ್ದ ನನ್ನಲ್ಲಿ ಸಂಗ್ರಹ ಕಾರ್ಯವನ್ನು ನಡೆಸುವ ಯಾವ ಉತ್ಸಾಹವೂ ಉಳಿದಿರಲಿಲ್ಲ. ಕಣ್ಣುಗಳು

ಎಳೆಯುತ್ತಿದ್ದವು. ಆಕಳಿಕೆ ಸುಳಿಯುತ್ತಿದ್ದವು. ತಲೆಯೆಲ್ಲ ಭಾರವಾಗಿ ಏನೂ ಬೇಡವೆನಿಸುತ್ತಿತ್ತು. ಸೂರಪ್ಪನನ್ನು ಹತ್ತು ನಿಮಿಷ ಹಾಡಿಸಿ ಬೀಳ್ಕೊಡಲೆಂದು ಕುಳಿತೆ! ಟೇಪುಗಳು ಮುಗಿದು ಹೋಗಿ ಧ್ವನಿಮುದ್ರಣ ಯಂತ್ರ ತನ್ನ ಅಸಹಾಯಕತೆಯನ್ನು ವ್ಯಕ್ತಪಡಿಸಿತು. ನನ್ನೊಡನೆ ಮೂರು ದಿನಗಳಿಂದ ಸಹಕರಿಸಿದ್ದ ಇತರರೂ ಹೊರಟುಹೋದರು. ಹತ್ತು ಗಂಟೆಗೆ ಸುತ್ತೆತ್ತಲೂ ಸದ್ದಡಗಿದಾಗ ಸೂರಪ್ಪ ನನ್ನ ಸೂಚನೆಯಂತೆ ದನಿಯೆತ್ತಿ ಹಾಡತೊಡಗಿದ.

ಶರಣೆಂಬೆ ಶಿವನಿಗೆ ಶರಣೆಂಬೆ ಗುರುವಿಗೆ
ಶರಣೆಂಬೆ ಏಳುಕೋಟಿ ಲಿಂಗ್ವಕೂ....

ಜುಂಜಪ್ಪನ ಕತೆಯ ಪಲ್ಲವಿಯನ್ನು ಸೂರಪ್ಪ ಎತ್ತಿಕೊಂಡ ರೀತಿಯಲ್ಲೇ, ಅವನ ದನಿಯ ಏರಿಳಿತದಲ್ಲಿಯೇ ಹೊಸ ಬೆರಗನ್ನು ಕಂಡೆ ನಾನು. ಮಾತಾಡಲು ತೊದಲುವ ವ್ಯಕ್ತಿ ತನ್ನ ಸ್ವಾಮಿಯ ಕತೆಯನ್ನು ಸ್ವಚ್ಛವಾಗಿ, ಸ್ಫುಟವಾಗಿ ಎಲ್ಲಿಯೂ ಎಡಹದೆ ಹಾಡುವುದನ್ನು ಕಂಡಾಗ ಬೆರಗಾದೆ! ಗಣೆಯ ನಾದ ದಂತೆಯೇ ಸೂರಪ್ಪನ ದನಿ ರಾತ್ರಿಯ ಮೌನಕ್ಕೆ ಸುವರ್ಣದ ಲೇಪನವನ್ನು ಬಳಿದಂತೆ ತೇಲಿತೇಲಿ ಬಂದಿತು....

ಅಡ್ಡ ಬಿದ್ದರೆ ದೊಡ್ಡೋನ ಗುಡ್ಡೀಗೆ
ದೊಡ್ಡಮ್ಮ ಹ್ವಡೆದ ಮಗಸೀಗೆ—ಜುಂಜಪ್ಪನಿಗೆ
ಅಡ್ಡ ಬಿದ್ದರೆ ದೊರೆಗಳೂಽಽ

ಸಿನ್ನೆ ಮಾಡ್ಯಾರೆ ಚಿನ್ನವ್ವನ ಗುಡ್ಡಿಗೆ
ಚಿನ್ನಮ್ಮನ್ಹಡೆದ ಮಂಗನೀಗೆ—ಜುಂಜಪ್ಪನಿಗೆ
ಅಡ್ಡ ಬಿದ್ದರೆ ದೊರೆಗಳು

ಗುಗ್ಗಳ ಹಾಕಿ ದೊಡ್ಡೋನ ನೆನೆದೇವೆ
ದೊಡ್ಡಬ್ಬಿ ಒಳಗೆ ಇರುವೋನು—ಜುಂಜಪ್ಪನ
ದುಗ್ಗಳನ್ಹಾಕಿ ನೆನೆದೇವೆ

ಮುಂಚೆ ನೆನೆದೇವೆ ಕಂಚಿ ಕಾಳೇಶ್ವರಿಯ
ಕಂಚುಗ್ಯಾರವನೆ ಕಲಿವೀರ–ಜುಂಜಪ್ಪ
ಕಂಚಿನ ಸೊಲ್ಲಾವೆ ನೆನೆದಾಗೆ–ಜುಂಜಪ್ಪ
ಮುಂಚಿನ ಸೊಲ್ಲಾಗೆ ನೆನೆದೇವೆ

ಸಾಮ್ರಾಣೆನ್ಹಾಕಿ ಸ್ವಾಮಿಯ ನೆನೆದೇವು
ಸಾಲ ಮಾಳಿಗೆ ಒಳಗಿರುವೊ–ಜುಂಜಪ್ಪ
ಸಾಮರಾಣೆ ಹಾಕಿ ನೆನೆದೇವು

ಅಕ್ಕ ನಿನ್ನ ಮಗ ಚಿನ್ನದುಂಗುರದೋನು
ಕನ್ನೆಗುಮಾರ ಕಲಿವೀರ–ಜುಂಜಪ್ಪ
ಮುಂಚಿನ ಸೊಲ್ಲಾಗೆ ನೆನೆದೇವು !

ಶಿವಪುರದ ಹಟ್ಟಿಯ ಸೂರಪ್ಪನ ದನಿ ಮರೆಯಾಯಿತು ನನ್ನ ಕಿವಿಗಳಿಗೆ. ಕಣ್ಣೆದುರು ಬಿಳಿಯ ಬಟ್ಟೆಯ, ಕೆಂಪು ವರ್ಣದ, ಮುಂಜುಟ್ಟಿನ ಸೂರಪ್ಪ ಮರೆಯಾಗಿ ಹಾಗಲವಾಡಿಯ ಹಳೆಯ ಗುಡಿಸಲ ತೊಂಬತ್ತರ ಸೂರಪ್ಪ ಅವತರಿಸಿದ. ಆ ಎಡೆಗೆ ಸೂರಪ್ಪನ ಮಾನವ ಧ್ವನಿ ಕೇಳದಾಯಿತು. ಕ್ರಮಕ್ರಮವಾಗಿ, ವೃದ್ಧ ಸೂರಪ್ಪ ಮಾಡಿದ ಗಣೆಯ ದಿವ್ಯನಾದ ತೇಲಿಬಂದಿತು. ಕೊನೆಯ ಹಳ್ಳಿಯ ಭವ್ಯ ಸೌಧಗಳು, ಗಿರಣಿ, ಅಂಗಡಿ, ಹೋಟೆಲುಗಳು ಎಲ್ಲವೂ ಮಾಯವಾದವು. ಹಾಗಲವಾಡಿಯ ಕಣಿವೆಯನ್ನಿಳಿದು, ತೆಂಗನ್ನು ಹಾದು, ಝರಿಗಳನ್ನು ದಾಟಿ, ಜುಂಜಪ್ಪನ ದಿವ್ಯ ಸನ್ನಿಧಿಯಲ್ಲಿ ಸೂರಪ್ಪನ ಗಣೆಯ ನಾದದಲ್ಲಿಯೇ ವರ್ಣವರ್ಣಗಳಲ್ಲಿ ಜುಂಜಪ್ಪನ ಕಥಾ ಚಿತ್ರಗಳು ಮೂಡ ತೊಡಗಿದವು !

ಪೂಜಾರಿ ಕೆಂಡಪ್ಪನನ್ನು ಎಚ್ಚರಿಸಲು ಚಿತ್ತುರ ದೇವರು ಬಿಳಿಯ ಕುದುರೆಯೇರಿ ಅಡ್ಡ ಬಂದಿದ್ದಾನೆ. ಹತ್ತೆಂಟು ಅಪಶಕುನಗಳಾಗಿವೆ. ಆದರೂ ಮಗನಿಗೆ ಬೇಡದ ಸಂಬಂಧವನ್ನು ಮಾಡಿದ್ದಾನೆ ಕೆಂಡಪ್ಪ. ಅವನ ತಲೆ ಸಿಡಿದು ಸಾವಿರ ಹೋಳಾಯಿತು. ಕೆಂಗುರಿ ಮಲ್ಲೇಗೌಡ ಭೀಕರ ಬಡತನವನ್ನು ಅನುಭವಿಸಿ ಕೆಂಪನ ಮಲ್ಲೇಗೌಡನನ್ನು ಧರೆಗೆ

ಅರ್ಪಿಸಿ ಕಣ್ಮರೆಯಾಗಿದ್ದಾನೆ. ಕಂಬೇರಗೊಲ್ಲರ ಹೆಣ್ಣುಮಗಳು ಚೆನ್ನಮ್ಮ ನನ್ನು ಕೆಂಪನ ಮಲ್ಲೇಗೌಡನು ಸರಿಸಿ, ಬರವನ್ನುಎದುರಿಸಲಾರದೆ ಏಳುಗೂಡಿನ ದನಗಳೊಡನೆ ಹನ್ನೆರಡು ವರ್ಷ ಪದಗದ ಗುಡ್ಡಕ್ಕೆ ಹೋಗಿದ್ದಾನೆ! ನಿಟ್ಟುಸಿರಿ ನಲ್ಲಿ ಬೇಯುತ್ತ ಬಸವಳಿದಿದ್ದ ಚಿನ್ನಮ್ಮನಿಗೆ ಶಿವ ಪಾರ್ವತಿಯರ ಕರುಣೆಯಿಂದ ಮಕ್ಕಳ ಫಲವಾಗಿದೆ. ಜುಂಜಪ್ಪ, ಮಾರಣ್ಣ, ಮೈಲಣ್ಣ, ಮಾರವ್ವೆಯರ ಅವತಾರವಾಗಿದೆ...ತಂದೆಯಿಲ್ಲದೆ ಮಕ್ಕಳು ಹುಟ್ಟಿವೆ....ತಾಯಿಗೆ ಗರ್ಭದಲ್ಲಿಯೇ ಧೈರ್ಯ ಹೇಳುತ್ತಿದ್ದಾನೆ ಜುಂಜಪ್ಪ "ದೇವರ ಮಕ್ಕಳು ನಾವು" ಎಂದು.

ಜುಂಜಪ್ಪನ ಕಥೆಯನ್ನು ಸವಿವರವಾಗಿ, ಕ್ರಮವತ್ತಾಗಿ ಆರಂಭದಿಂದ ಸೂರಪ್ಪ ಹಾಡತೊಡಗಿದ. ಧ್ವನಿಮುದ್ರಣಯಂತ್ರವನ್ನು ಕೈಬಿಟ್ಟು ಪುಸ್ತಕಗಳನ್ನು ಕೈಗೆತ್ತಿಕೊಂಡೆ. ದೀಪದಲ್ಲಿ ಎಣ್ಣೆ ಮುಗಿದರೂ, ಕುಳಿತ ಜನ ಅಲುಗಲಿಲ್ಲ. ನನ್ನ ಕೈ ನಿಲ್ಲಲಿಲ್ಲ. ಬೆಳಗಿನಿಂದ ಎಲ್ಲಿಯೋ ಹುದುಗಿ ಹೋಗಿದ್ದ ಚೈತನ್ಯ ತಾನಾಗಿಯೇ ಚಿಮ್ಮಿಬಂದಿತು. ಹೊಸ ನಿಧಿಯನ್ನು ಕಂಡಂತೆ ಹುಚ್ಚೆದ್ದು ಆ ಕಥಾಸಾಗರವನ್ನು ಧುಮುಕಿದೆ. ಮುಂಗೋಳಿ ಕೂಗಿತು: ಮೂಡು ಕೆಂಪೇರಿತು, ಸೂರಪ್ಪ ಆರೇಳು ಗಂಟೆಗಳ ಕತೆಯನ್ನು ನಿಲ್ಲಿಸಲಿಲ್ಲ.

ಸೋಲದೆ ಹಾಡಿಕೊಂಡು ಸಾಗಿದ. ಕತೆಯ ಒಪ್ಪ, ಹಾಡಿನ ವೈಖರಿ, ಪದ್ಯಗಳ ಸೊಗಸಿಗೆ ಮನಸೋತು, ಅವನ ಕಂಠತ್ರಾಣಕ್ಕೆ ತಲೆದೂಗಿ ಬೆಳಗಿನ ವರೆಗೂ ಕತೆಯನ್ನು ಕೇಳಿ ಕೇಳಿ ಹಿಗ್ಗಿದೆ. ಕೈ ಯಾಂತ್ರಿಕವಾಗಿ ಬರೆದುಕೊಳ್ಳು ತ್ತಿತ್ತು ಅಷ್ಟೆ!

ಬೆಳಗಿನ ವೇಳೆಗೆ ಸೂರಪ್ಪನ ಪರಿವಾರ ಕರಗಿ ಹೋಯಿತು. ಆದರೆ ಸೂರಪ್ಪ ಮಾತ್ರ ಹೋಗಲಿಲ್ಲ. ಜುಂಜಪ್ಪನ ಅನುಗ್ರಹ ಸಂಪೂರ್ಣವಾಗಿ ಆಗಿರಬೇಕು. ಜುಂಜಪ್ಪನ ಕತೆ ಅಪೂರ್ಣವಾಗಿ ಉಳಿಯಲಿಲ್ಲ. ಎರಡು ದಿನಗಳ ನಿರಂತರ ಯಾತ್ರೆಯಲ್ಲಿ ಜುಂಜಪ್ಪನ ದನಗಳ ಜೊತೆ ಅಲೆದು, ಅವನು ಮೆರೆದ ಪವಾಡಗಳಲ್ಲಿ ಬೆರೆತು, ಕಂಬೇರ ಹಟ್ಟಿಯ ಸೋದರ ಮಾವಂದಿರ ಸೊಕ್ಕನ್ನು ಮುರಿಯುವವರೆಗೆ, ಬಡಮೈಲನ ಸಾಹಸಗಳನ್ನು ಕಾಣುವವರೆಗೆ, ಬೆಟ್ಟಗುಡ್ಡಗಳಲ್ಲಿ, ಕಣಿವೆ ಕಂದ್ಗರಗಳಲ್ಲಿ, ಅಲೆದು ಅಲೆದು ಬಂದಾಗ ಹೃದಯ

ದಲ್ಲಿ ಹರ್ಷ ತುಳುಕಾಡುತಿತ್ತು; ಕಣ್ಣಲ್ಲಿ ಆನಂದಾಶ್ರು ಚಿಮ್ಮುತಿತ್ತು! ಗಿರಿವನಗಳ ಮಡಿಲಲ್ಲಿ ನಿರ್ಮಲ ವ್ಯಕ್ತಿತ್ವವನ್ನು ಮೆರೆಯುತ್ತ, ಸಂಯಮದ ಸಾಕಾರ ಮೂರ್ತಿಯಾಗಿ ಮೆರೆದ ಜುಂಜಯ್ಯನ ಅಮರ ಚಿತ್ರವನ್ನು ಮನೋಭಿತ್ತಿಯಲ್ಲಿ ಮೂಡಿಸಿದ ಸೂರಪ್ಪ.

ಬಯಲು ಬೆಟ್ಟಗಳಲ್ಲಿ ತನ್ನ ಏಳುಗೂಡಿನ ದನಗಳೊಡನೆ ಕಾವಲಿನಿಂದ ಕಾವಲಿಗೆ ಸಾಗುತ್ತ ಮಾರಣ್ಣ ಮೈಲಣ್ಣರಿಗೆ ಮಾರ್ಗದರ್ಶನ ಮಾಡುತ್ತ, ಮಲತ ಸೋದರ ಮಾವಂದಿರ ಸೊಕ್ಕನ್ನು ಮುರಿಯುವ ಕಾಲ ಪಕ್ವವಾಗುವವರೆಗೆ ಕಾಡಕಲ್ಲುಗಳನ್ನು ತುಳಿದ, ವಿಷದುಣಿಸನ್ನು ಪ್ರಸನ್ನನಾಗಿ ಸ್ವೀಕರಿಸಿದ; ಆದರೂ ದಿವ್ಯ ತೇಜಸ್ಸಿನಿಂದ ಮೇಲೆದ್ದು ತನ್ನ ಮಹಿಮೆಯನ್ನು ಮೆರೆದ.

ಜುಂಜಪ್ಪನ ದಿವ್ಯಾಕಾರವನ್ನು ಕಲ್ಪಿಸಿಕೊಳ್ಳುತ್ತ ಯಾವುದೋ ಪವಿತ್ರ ಯಾತ್ರಾಸ್ಥಳದಲ್ಲಿ ಮಿಂದು ಪುನೀತವಾದಂತೆ ಮನಸ್ಸಿಗೆ ಭಾಸವಾಯಿತು. ಸೂರಪ್ಪನನ್ನು ಅಭಿನಂದಿಸಲು ಮಾತುಗಳೇ ಸೋತು ಕೃತಜ್ಞತೆಯ ಕಣ್ಣಂಚಿನ ಭಾವದ ಮಿಂಚು ವಂದಿಸಿತು ಆ ಕಲಾಯೋಗಿಗೆ!

# ನೆರೆ ಹೊರೆ

ಮನೆಯ ಮೆಯ್ಗೆ ಕಿಟಕಿ ಕಣ್ಣು
ಕವಿ ಕೊಟಡಿಯ ಜೀವನು.
ಮನೆಯ ಗುಡಿಗೆ ಕಿಟಕಿ ಪಡಿಮೆ ;
ಕಲೆಯ ಕಣ್ಣಗೇನು ಕಡಿಮೆ ?
ಪ್ರತ್ಯಕ್ಷನು ದೇವನು !

(ಕುವೆಂಪು)

ಮನೆಯ ಕಿಟಕಿ ಕಾವ್ಯದ ಕನಸನ್ನು ನೇಯುವ ಒಂದು ಕಣ್ಣು ಕವಿಯ ಪಾಲಿಗೆ. ಆ ಕಿಟಕಿಯ ಮೂಲಕವೇ ಅವನು ಸೌಂದರ್ಯದ ಸಾಕ್ಷಾತ್ಕಾರ ಮಾಡಿಕೊಳ್ಳುತ್ತಾನೆ. ಮಧುರ ನಾದಗಳ, ಭವ್ಯ ದೃಶ್ಯಗಳ ಸುಂದರ ಮೆರವಣಿಗೆ ಆ ಕಿಟಕಿಯ ಮೂಲಕವೇ ನಡೆಯುತ್ತದೆ. ಕೊಟಡಿಯ ಕುರ್ಚಿಯಲ್ಲಿ ಕುಳಿತು ಆಚೆ ನೋಡಿದರೆ ಬಿತ್ತರದ ಆಗಸ ತಿಳಿನೀಲಿಯ ಶಾಂತ ಸಮುದ್ರವಾಗಿ ತೋರ ಬಹುದು. ಅಲ್ಲಿಲ್ಲೋ ಹಾರಾಡುವ ಬೆಳ್ಳಕ್ಕಿಯ ಹಿಂಡು ನಿಶ್ಚಲವಾದ ನೀಲಿಯ ನೀರಧಿಯ ಹಿನ್ನೆಲೆಯಲ್ಲಿ ತೇಲುತ್ತದೆ.

ಬೆಳ್ಳಿಯ ಮುಗಿಲಿನ ಚೂರುಗಳಂತೆ
ಬೆಳ್ಳಕ್ಕಿಯ ಜೊತೆ ಹಾರಾಡುತ್ತಿವೆ
ಮುಕ್ತಿಯ ಪಡೆವಮಲಾತ್ಮಗಳಂತೆ
ಶೂನ್ಯದಂಚಿನೊಳೆ ಹೊಂಚಾಡುತ್ತಿವೆ !
ದೃಷ್ಟಿಯೆ ದಣಿವಂದದೊಳು ಹಕ್ಕಿ
ಏರುತ್ತೇರುತ್ತಾಗಿವೆ ಚುಕ್ಕಿ !

(ಕುವೆಂಪು)

ಇಂಥ ಸುಂದರ ದೃಶ್ಯಗಳನ್ನು ಕಿಟಕಿಯ ಮೂಲಕ ಸವಿಯುವ ಸೌಭಾಗ್ಯವನ್ನು ಬೆಳೆಯುತ್ತಿರುವ ನಗರಗಳ ಎಲ್ಲ ಮನೆಗಳೂ ತಂದು ಕೊಡ

ಲಾರವು. ನೋಡುವ ನೋಟ, ಕೇಳುವ ನಾದ ಎರಡೂ ನಮ್ಮ ಶಾಂತಿ ನೆಮ್ಮದಿಗಳನ್ನು ಕಲಕುವ, ತಾಳ್ಮೆಯನ್ನು ಪರಿಕಿಸುವ ಸಾಧನಗಳಾಗಿ ಬಿಡುತ್ತವೆ ಬಹುಮಂದಿಗೆ. ಮನೆಯ ಮೇಲೆ ಮನೆ, ಅಕ್ಕಪಕ್ಕದಲ್ಲಿ ಮನೆ, ಹಿಂದೆ ಮುಂದೆ ಮನೆ ಎಲ್ಲೆಲ್ಲಿಯೂ ಜನ! ಜನ!! ಮೇಲಿನಿಂದ ಏನೋ ಸದ್ದು ತೇಲಿಬಂದು ಕಚಗುಳಿಯಿಡುತ್ತದೆ, ಪಕ್ಕದ ಮನೆಯ ಮಗು ಎದ್ದು ಅಳುತ್ತದೆ. ಇನ್ನೊಂದು ಮನೆಯ ಸಂಗೀತ ಕಿವಿಯನ್ನು ಕೊರೆಯುತ್ತದೆ. ಎದುರು ಮನೆಯ ರೇಡಿಯೋ ಬೀದಿಗೆಲ್ಲ ಸಿನೆಮ ಸಂಗೀತ ಸುಧೆಯನ್ನು ಹಂಚುತ್ತದೆ!

ಹೊರಗೆ ನೋಡುವುದೇನಿದೆ, ತರಕಾರಿಯವರು ಸಾಲುಗಟ್ಟಿ ಬರುತ್ತಾರೆ; ಹಿಂದೆಯೇ ಹಳೆಯ ಪೇಪರು ಖಾಲಿ ಶೀಶೆಯವನು. ಅವನು ಅತ್ತ ಸಾಗಿದರೆ ಬೀದಿಯ ಹೃದಯವೇ ಸೀಳುವಂತೆ ಡಬ್ ಡಬ್ ಎಂದು ಡಬ್ಬವನ್ನೇ ಕುಟ್ಟುತ್ತ ಸೀಮೆಯ ಎಣ್ಣೆಯವನು ಗಾಡಿಯನ್ನು ಹೊಡೆದುಕೊಂಡು ಬರುತ್ತಾನೆ! ಬೀದಿ ಯಲ್ಲೇನೋ ನಮ್ಮನ್ನು ಕೆಣಕದೆ ಇವೆಲ್ಲ ಸಾಗಿಹೋಗುತ್ತವೆ ಎಂದರೆ ಸೌದೆ ಗಾಡಿಯವನು, ಇದ್ದಿಲ ಮೂಟೆಯವನು ನಮಗೆ ಬೇಡವಾದರೂ 'ಬುದ್ಧೀ' ಎಂದು ಮನೆಗೆ ಬಂದು, ಬಾಗಿಲು ತಟ್ಟಿ, ಮಲಗಿದ್ದರೂ ಎಚ್ಚರಿಸಿಯೇ ಹೋಗು ತ್ತಾರೆ! ಅಕ್ಕನ ವಚನವೇನೊ ನೆನಪಿಗೆ ಬರುತ್ತದೆ—

ಬೆಟ್ಟದ ಮೇಲೊಂದು ಮನೆಯ ಮಾಡಿ
ಮೃಗಗಳಿಗಂಜಿದೊಡೆಂತಯ್ಯ ?
ಸಮುದ್ರದ ತಡಿಯಲೊಂದು ಮನೆಯ ಮಾಡಿ
ನೊರೆ ತೆರೆಗಳಿಗಂಜಿದೊಡೆಂತಯ್ಯ ?
ಸಂತೆಯೊಳಗೊಂದು ಮನೆಯ ಮಾಡಿ
ಶಬ್ದಕ್ಕೆ ನಾಚಿದೊಡೆಂತಯ್ಯ?....

ಲೋಕದಲ್ಲಿ ಹುಟ್ಟಿದ ಬಳಿಕ ಯಾವುದಕ್ಕೂ ಅಂಜದೆ ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು ನಿಜ! ಆದರೆ ಅದಕ್ಕೊಂದು 'ಇತಿ–ಮಿತಿ' ಇಲ್ಲದಿದ್ದಾಗ ನಿತ್ಯ ಬದುಕುವ ಮನೆಯೇ ಕಾದ ಓಡಾಗುತ್ತದೆ, ಉರಿವ ಬಂಡೆ ಯಾಗುತ್ತದೆ!

ಹೊರಗಿನ ಗೊಂದಲಗಳಿಗೆ ಅಷ್ಟಾಗಿ ನಾನು ಕಿವಿಗೊಡುವುದಿಲ್ಲ ಈಗೀಗ. ಅಂಗಳದಲ್ಲಿ ಹೂಗಿಡಗಳು ಬೆಳೆದಿವೆ. ನಮ್ಮ ಹರಳು ಗಿಡ, ದಾಳಿಂಬೆಯ ಗಿಡಗಳು ಹತ್ತಾರು ಅಡಿ ಎತ್ತರಕ್ಕೆ ಬೆಳೆದು ಬೀದಿಯ ದೃಶ್ಯಗಳನ್ನೆಷ್ಟೋ ಮರೆ ಮಾಡಿವೆ. ಸೇವಂತಿಗೆ ಚೆಂಡುಮಲ್ಲಿಗೆಗಳು ಎರಡು ಕಿಟಕಿಗಳ ಅಂಚಿನಲ್ಲೂ ದಟ್ಟವಾಗಿ ಕವಿದು ಹೂವಿನ ಹಬ್ಬವನ್ನು ತರುತ್ತವೆ ಕಣ್ಣಿಗೆ. ಯಾವುದೋ ಹೆಸರರಿಯದ ಬಳ್ಳಿಯೊಂದು ನನ್ನ ಅಸಹಾಯಕತೆಯನ್ನು ನೋಡಿ ತಾನಾಗಿಯೇ ಕಿಟಕಿಯನ್ನೇರಿ ಬಂದು ದಟ್ಟವಾಗಿ ಕಂಬಿಗಳ ಮೇಲೆ ಹಬ್ಬಿ ತೆರೆಯಾಗಿ ನಿಂತಿದೆ. "ಅಯ್ಯೊ ಅದನ್ನು ಕಡಿದು ಹಾಕಿ, ಕಿಟಕಿಗಳ ಮೇಲೆ ಹಾಗೆ ಹಬ್ಬುವುದು ಒಳ್ಳೆಯದಲ್ಲ! ಹಾವುಗಳು ಹತ್ತಿ ಬರುತ್ತವೆ!" ಎಂದು ಅನೇಕ ಮಿತ್ರರು ನನಗೆ ಆಗಾಗ ಹೇಳುತ್ತಲೇ ಬಂದಿದ್ದಾರೆ! ಆದರೆ ನನಗೂ ಆ ಬಳ್ಳಿಗೂ ನಿಕಟ ಸ್ನೇಹ ಬೆಳೆದು ಅದನ್ನೆಂದೂ ಕೀಳುವ ಸಾಹಸ ಮಾಡುವಂತಿಲ್ಲ. ಕಿಟಕಿಯ ಪಕ್ಕದಲ್ಲಿ ಓದುತ್ತ ಕುಳಿತ ನನ್ನ ಕೆನ್ನೆಗೆ ತನ್ನ ಮೃದು ಹಸ್ತವನ್ನು ಸ್ಪರ್ಶಿಸಿ ಕುಶಲವನ್ನು ಕೇಳುತ್ತದೆ ಅದು ಒಮ್ಮೊಮ್ಮೆ! ಮನಸ್ಸು ಬೇಸತ್ತಾಗ ವೈದಡವಿ ಸುಖವನ್ನು ತರುತ್ತದೆ ಇನ್ನೊಮ್ಮೆ! ಬೇಸಿಗೆಯಲ್ಲಿ ಉರಿಸೆಕೆಯನ್ನು ತಡೆಯುವ, ಮಳೆಗಾಲದಲ್ಲಿ ಚಳಿಮಳೆಗಳನ್ನು ತಡೆಯುವ ಅದು ನನ್ನ ಪಾಲಿನ ವರವಾಗಿದೆ, ಕಿಟಕಿಯ ದೈವ ನೀಡಿರುವ ವರದ ಹಸ್ತವಾಗಿದೆ.

ಇಷ್ಟೆಲ್ಲ ರಕ್ಷಣೆಯನ್ನು ನೀಡಿರುವ ನಮ್ಮ ಕಿಟಕಿ ತನ್ನ ಕಾರ್ಯದಲ್ಲಿ ವಿಫಲವಾಗುವುದು ನಮ್ಮ ನೆರೆಮನೆಯ ಹೆಣ್ಣುಮಕ್ಕಳು ಹಾಡಲು ತೊಡಗಿದಾಗ! ಪಟ್ಟಣಗಳ ಈ ಸಂಗೀತದ ಗೀಳು ಪಕ್ಕದ ಮನೆಯವರ, ಸುತ್ತೆಂಟು ಮನೆಗಳ ಶಾಪವಾಗಿ ನಿಂತುಬಿಡುತ್ತದೆ!

ಪಕ್ಕದ ಮನೆಯ ದಂಪತಿಗಳಿಗೆ ಆರು ಮಂದಿಯೋ ಏಳು ಮಂದಿಯೋ ಹೆಣ್ಣುಮಕ್ಕಳಿರಬೇಕು. ಪ್ರಾಥಮಿಕ ಶಾಲೆಯಿಂದ ಕಾಲೇಜಿನ ವರೆಗೆ ಅವರು ಓದುವವರೇ. ಮನೆಯೊಡೆಯ ನಿವೃತ್ತಿಯ ಸುಖವನ್ನು ಅನುಭವಿಸುತ್ತಿದ್ದಾರೆ. ಮನೆಯ ಮಡದಿ ಮಾತಾಡಿದರೆ ಆಚೆಯ ಮೂರು ಮನೆಗಳೂ ಮೂರ್ಛೆ ಬೀಳುತ್ತವೆ. ಈ ಮಾಗಿದ ಬುದ್ಧಿಯ ಯಜಮಾನರಾದರೂ ಮೆಲ್ಲನೆ ನುಡಿ

ಯುವವರಲ್ಲ ! ನೆರೆಯಲ್ಲಿ ಜನರಿದ್ದಾರೆ, ಅವರು ಬದುಕಿದ್ದಾರೆ, ಎಂಬ ಲಕ್ಷ್ಯ ಅವರಿಗೆ ಎಂದೂ ಬಂದಂತಿಲ್ಲ. ಅತ್ಯಂತ ರಹಸ್ಯ ವಿಷಯಗಳನ್ನೂ ಅವರು ನೆರೆಮನೆಯ ನಮ್ಮ ಕಿವಿ ಜಡ್ಡು ಹಿಡಿದು ಹೋಗುವಂತೆ ಮಾತನಾಡುತ್ತಾರೆ. ಒಮ್ಮೊಮ್ಮೆ ಮನೆಯ ಅಷ್ಟು ಮಂದಿಯೂ ಏಕಕಾಲದಲ್ಲಿಯೇ ಮಾತಾಡ ತೊಡಗುತ್ತಾರೆ ! ಯಾರ ಮಾತು ಯಾರಿಗೂ ಅರ್ಥವಾಗದು ! ಆದರೂ ಒಟ್ಟಿಗೇ ಮಾತಾಡುವ, ಕೂಗುವ, ವಾದ ಮಾಡುವ, ಜಗಳವಾಡುವ ಹವ್ಯಾಸಗಳನ್ನು ಬಹಳ ಚೆನ್ನಾಗಿ ಬೆಳೆಸಿಕೊಂಡಿದ್ದಾರೆ ಅವರು !

ಮೇಜಿನ ಪಕ್ಕದಲ್ಲಿ ಕುಳಿತು ಏನನ್ನೋ ಬರೆಯಲು ಲೇಖನಿಯನ್ನು ಕೈಗೆತ್ತಿಕೊಂಡು ಕಾಯುತ್ತೇನೆ. ರೈಲು ಬಡಬಡಿಸಿಕೊಂಡು ಬರುತ್ತದೆ, ಮನೆ ಸಿಡಿದು ಹೋಗುವಂತೆ ಅರ್ಭಟಿಸಿ ಹೊರಟು ಹೋಗುತ್ತದೆ, ಎಂದು. ಆದರೆ ಅದು ಮುಂದೆ ಹೊರಟುಹೋಗುವ ವಾಹನವಲ್ಲ, ಮನೆಗೆ ಅಂಟಿಕೊಂಡೇ ನಿಂತ, ಸದಾ 'ಗಡಗಡಾ, ಗಡಗಡಾ' ಎಂದು ಸದ್ದು ಮಾಡಿ ನಮ್ಮನ್ನು ಸೊಪ್ಪು ಮಾಡುವ ಒಂದು ಯಂತ್ರ !

ಅನತಿ ದೂರದಲ್ಲಿ ಧಾನ್ಯದ ಗಿರಣಿಯೊಂದಿದೆ. ಸದಾ ಅದು ಒರ್ರೋ ಎಂದು ಕೂಗಿ ಕರೆಯುತ್ತದೆ. ಯಾವುದೋ ಕಾಡಿನ ಹುಚ್ಚು ಹೊಳೆಯಂತೆ. ಆದರೆ ಅದು ಏಕಮುಖವಾದ ಸದ್ದು ಮಾಡುವುದರಿಂದ ಅದಕ್ಕೆ ಒಗ್ಗಿಕೊಳ್ಳ ಬಹುದು ! ಒಮ್ಮೆ ಏರುವ, ಒಮ್ಮೆ ತಗ್ಗುವ, ಒಮ್ಮೊಮ್ಮೆ ಕೋಡಿಯನ್ನು ಕೊಚ್ಚಿಕೊಂಡೇ ನುಗ್ಗಿಬಿಡುವ ಪ್ರವಾಹಕ್ಕೆ ಏನು ಮಾಡಲಾಗುತ್ತದೆ !

ನಮ್ಮ ಪಕ್ಕದ ಮನೆಯ ಸಂಗೀತ ಕಛೇರಿ ಬೆಳಗಿನ ಮಬ್ಬು ಹರಿಯುವ ಮುನ್ನವೇ ಆರಂಭವಾಗುತ್ತದೆ. ರಾತ್ರಿ ಹನ್ನೊಂದು ಹನ್ನೆರಡರ ವರೆಗೆ ಅವ್ಯಾಹತವಾಗಿ ಸಾಗುತ್ತದೆ.

ಎಲ್ಲರೂ ಹಾಡುವವರೇ ಆದುದರಿಂದ ಹಾಲಿನಲ್ಲಿ ಗೋಷ್ಠಿ ನೆರೆಯುತ್ತದೆ ! ಒಬ್ಬರು ಹಾಡಿ ನಿಲ್ಲಿಸಿದರೆ ಇನ್ನೊಬ್ಬರು ಎತ್ತಿಕೊಳ್ಳುತ್ತಾರೆ ! ಆದರ ಮೇಲೆ ಉಳಿದವರು ಚರ್ಚೆ ಮಾಡುತ್ತಾರೆ ! ಒಮ್ಮೊಮ್ಮೆ ಸಾಮೂಹಿಕ ಮೇಳವಾಗಿಯೂ ಅದು ಪರಿವರ್ತಿತವಾಗುತ್ತದೆ. ಅದೊಂದು 'ರಿಲೇ' ಆಟದಂತೆ. ಒಬ್ಬರು ಕೈಬಿಟ್ಟದ್ದನ್ನು ಇನ್ನೊಬ್ಬರು ಮುಂದುವರಿಸುತ್ತಾರೆ. ತರಗತಿಗೆ ಸಿದ್ಧವಾಗುತ್ತಲೋ, ಯಾವುದೋ ಅಗತ್ಯ ಲೇಖನವನ್ನು ಬರೆಯುತ್ತಲೋ ಕುಳಿತ ನಾನು

ದೇವರಿಗೆ ಶಾಪ ಹಾಕುತ್ತೇನೆ! "ಈ ಕಿವಿಗಳನ್ನೇಕೆ ಕೊಟ್ಟೆ? ನನ್ನನ್ನು ಕಿವುಡ ನನ್ನಾಗಿ ಮಾಡಿಬಿಡಬಾರದಿತ್ತೆ!" ಎಂದು. ಕೆಟ್ಟ ದೃಶ್ಯವನ್ನು ಕಂಡರೆ ಕಣ್ಣನ್ನು ಮುಚ್ಚಿಕೊಳ್ಳಬಹುದು! ಆ ದೃಶ್ಯದತ್ತಣಿಂದ ದೃಷ್ಟಿಯನ್ನು ತಿರುಗಿಸಿಬಿಡಬಹುದು! ಆದರೆ ಕಿವಿಯನ್ನೇನು ಮಾಡುವುದು! ಕೈಯಿಂದ ಮುಚ್ಚಿಕೊಂಡರೂ ಎಲ್ಲಿಯೋ ಪಾತಾಳದ ಆಳದಲ್ಲಿ 'ಜುಯ್ಯೋ' ಎಂದು ಶಬ್ದ ಬರುತ್ತಲೇ ಇರುತ್ತದೆ. ಅಲ್ಲದೆ ಕೈಗಳು ಅದೆಂದೊ ಕೆಲಸದಲ್ಲಿ ಸದಾ ನಿರತವಾಗಿರಲು ಹೇಗಾಗುತ್ತದೆ! ಕಣ್ಣಿಗೆ ರೆಪ್ಪೆಯನ್ನು ಕೊಟ್ಟಂತೆ ಕಿವಿಗೆ ಮುಚ್ಚಳಗಳನ್ನೂ ಆ ಸೃಷ್ಟಿಕರ್ತ ನೀಡಿದ್ದರೆ ಇನ್ನೂ ಹತ್ತು ವರ್ಷ ನಮ್ಮ ಆಯಸ್ಸು ಹೆಚ್ಚುತ್ತಿತ್ತು!

ವಿಜ್ಞಾನಿಗಳು ಕಣ್ಣಿಗೆ ಕಪ್ಪು ಕನ್ನಡಕವನ್ನು ಕಂಡುಹಿಡಿದು ಬೆಳಕಿನ ಪ್ರಖರತೆಯನ್ನು ತಡೆಯುವ ಒಳ್ಳೆಯ ಸಾಧನವೊಂದನ್ನೇನೋ ಸೃಷ್ಟಿಸಿದರು. ನಗರ ಜೀವನದ ಅನುಭವವಿದ್ದೂ ಅವರು ಕಿವಿಯ ಆರೋಗ್ಯ ಸಂರಕ್ಷಿತವಾಗುವಂತೆ ಶಬ್ದ ನಿಯಂತ್ರಣ ಯಂತ್ರವೊಂದನ್ನು ಏಕೆ ತಯಾರಿಸಲಿಲ್ಲ—ಎಂದು ಒಮ್ಮೊಮ್ಮೆ ಯೋಚಿಸುತ್ತೇನೆ! ಮನೆಗಳ ಅಂದಾಜನ್ನು ತಯಾರಿಸುವ ಗೃಹ ನಿರ್ಮಾಣ ಶಾಖೆಯವರು ಒಂದು ಮನೆಗೂ ಮತ್ತೊಂದು ಮನೆಗೂ ಕೆಲವು ಅಡಿಗಳ ಅಂತರವನ್ನೇನೋ ನೀಡಿದ್ದಾರೆ, ಆದರೆ ಮುಂದಿನ ಅನಾಹುತಗಳನ್ನವರು ನಿರೀಕ್ಷಿಸಿ 'ನೆರೆಮನೆಯವರ ಹಿತದೃಷ್ಟಿಯಿಂದ ಮನೆಗೆ ಕಿಟಕಿಗಳನ್ನೇನನ್ನೂ ಇಟ್ಟುಕೊಳ್ಳಬಾರದು, ಪೂರ್ವಕಾಲದ ಮನೆಗಳಂತೆ ಕುಬ್ಜವಾದ ಒಂದು ಬಾಗಿಲಲ್ಲೆ ಎಲ್ಲರೂ ನಡೆಯಬೇಕು' ಎಂದೇಕೆ ನಿಯಮ ಮಾಡಲಿಲ್ಲ!

ಒಂದು ದಿನ ರಾತ್ರಿ ಹನ್ನೊಂದರ ವರೆಗೆ ನಾನು ಮೇಜಿನ ಬಳಿ ಕುಳಿತು ನನ್ನ ಅವಕಾಶವನ್ನು ಕಾದೆ. ನಮ್ಮ ಮನೆಯವರೆಲ್ಲ ಮಲಗುವ ಸಿದ್ಧತೆ ಮಾಡಿಕೊಳ್ಳುತ್ತಿದ್ದರು. ಆದರೆ ನೆರೆಮನೆಯಲ್ಲಿ ಸಂಗೀತ ನಿಲ್ಲಲಿಲ್ಲ. ರಾಮೋತ್ಸವದ ಕಾಲ ಅದು. ರಾತ್ರಿ ಹನ್ನೊಂದರ ವರೆಗೆ ಸಂಗೀತ ಕಛೇರಿ, ಮನೆಗೆ ಬಂದ ಮೇಲೆ ಮರದ ಹನಿ! ಮಳೆ ಬಿಟ್ಟರೂ ಅದು ಬಿಡಲಿಲ್ಲ! ಪಕ್ಕದ ಮನೆಯ ಸಡಗರಕ್ಕೆ, ಸಂಭ್ರಮಕ್ಕೆ ನಮ್ಮ ಮಗು ಎದ್ದು ಅಳ ತೊಡಗಿತು! ನಾಲ್ಕು ಸಾಲನ್ನೂ ಬರೆಯಲು ಅವಕಾಶ ದೊರೆಯದ ನನ್ನ ತಾಳ್ಮೆ ಎತ್ತಲೋ ಹಾರಿ ಹೋಯಿತು! ಲೇಖನಿಯನ್ನು ಮೇಜಿನ ಮೇಲೆ ಕುಕ್ಕಿ ನೆತ್ತಿಗೇರಿದ ಕೋಪದಿಂದ ಕುದಿಯುತ್ತ ಹೊರಗೆ ಬಂದೆ!

"ಏನು ಸ್ವಾಮಿ! ಪಕ್ಕದಲ್ಲಿರುವ ನಾವು ಮನುಷ್ಯರೋ ಮರಗಳೊ! ರಾತ್ರಿ ಹನ್ನೊಂದು ಗಂಟೆಯಾದರೂ ನಿಮ್ಮದು ಮುಗಿಯಬಾರದೆ!"

ನನ್ನ ಆರ್ಭಟಕ್ಕೆ ಒಂದು ಕ್ಷಣ ಸದ್ದು ನಿಂತಿತು! ಆದರೆ ಕಿಟಕಿಯ ಬಳಿ ಆ ಯಜಮಾನರ ತಲೆ ಕಾಣಿಸಿಕೊಂಡಿತು.

"ನಮ್ಮ ಮನೆಯಲ್ಲಿ ನಾವು ಏನಾದರೂ ಮಾಡಿಕೊಳ್ತೀವೆ! ಅದನ್ನೆಲ್ಲ ನೀವು ಕೇಳಬಾರದು!"

ತಾರ್ಕಿಕವಾದ ಉತ್ತರ ಅತ್ತಣಿಂದ ತೇಲಿಬಂದಿತು. ಎಂದೂ ಯಾರೊಡನೆಯೂ ಜಗಳವಾಡದ ನಾನು ಅವರೊಡನೆ ವಾದ ಪ್ರತಿವಾದಕ್ಕೆ ನಿಂತೆ; ಆದರೂ ಅವರು ತಮ್ಮ ತಪ್ಪನ್ನು ಒಪ್ಪಿಕೊಳ್ಳಲಿಲ್ಲ! ಅಚೀಚೆಯ ಮನೆಯವರು ಎದ್ದು ಕಿಟಕಿಗಳಲ್ಲಿ ಇಣಕು ಹಾಕಿದರು. ಯಾರೂ ಈಚೆಗೆ ಬಂದು ನನಗೆ ರಕ್ಷಣೆ ನೀಡಲಿಲ್ಲ; ನನ್ನನ್ನು ಸಮರ್ಥಿಸಿಕೊಳ್ಳಲಿಲ್ಲ! "ಅವರವರು ಕಿತ್ತಾಡಿಕೊಂಡರೆ ನಮಗೇನು!" ಎನ್ನುವಂತೆ, ಅವರು ಮೂಕ ಪ್ರೇಕ್ಷಕರಾದರು! ಹತ್ತು ಬಾಯಿಗಳನ್ನು ಎದುರಿಸಲಾರದೆ ಏಕಾಂಗವೀರನಾಗಿ ನಮ್ಮ ಅಂಗಳದಲ್ಲಿ ನಿಂತು ಹೋರಾಡುತ್ತಿದ್ದ ನನ್ನನ್ನು ಒಳಗಿನಿಂದ ನಮ್ಮಾಕೆ ಎಚ್ಚರಿಸಿ ನನ್ನನ್ನೇ ಒಳಗೆ ಕರೆದೊಯ್ಯಬೇಕಾಯಿತು! ಯಾರೂ ನನ್ನ ನೆರವಿಗೆ ಬರಲಿಲ್ಲವೆಂಬ ಎದೆಗುದಿಯಲ್ಲಿ ಬೇಯುತ್ತ, ಬುಸುಗುಡುತ್ತ, ಧಡಾರನೆ ಬಾಗಿಲು ಹಾಕಿಕೊಂಡು ಒಳಗೆ ಬಂದೆ. ಮನೆಯೊಳಗೆ ನಿಂತು ಕಿಟಕಿಯ ಮೂಲಕವೇ ಆ ಫಿರಂಗಿಗಳು ಇನ್ನೂ ಶಬ್ದ ಮಾಡುತ್ತಲೇ ಇದ್ದವು!

ನಮ್ಮ ನೆರೆ ಹೊರೆಯ ಬಗ್ಗೆ ನನಗೆ ಇನ್ನಿಲ್ಲದ ಜುಗುಪ್ಸೆ ಮೂಡಿತು! ನಗರ ನಿವಾಸಿಗಳು ಮಾನವೀಯತೆಯನ್ನು ಕಳೆದುಕೊಳ್ಳುತ್ತಿದ್ದಾರೆ, ಸಹಕಾರ ಸೌಹಾರ್ದಗಳು ಅವರಿಂದ ದೂರವಾಗುತ್ತಿವೆ, ತಮ್ಮ ಹಿತರಕ್ಷಣೆ ಸಾಧಿತವಾದರೆ ಇತರರ ಹಂಗೇನು ಎನ್ನುವ ಸಂಕುಚಿತ ಮನೋಭಾವ ಅವರದಾಗುತ್ತಿದೆ, ನಮ್ಮ ಸಮಾಜ ಜೀವನ ಕುಸಿಯುತ್ತಿದೆ, ನಾವು ಜಾಣರಾಗುತ್ತಿದ್ದೇವೆ ನಮ್ಮ ಎಚ್ಚರ ನಮ್ಮದಾದರೆ ಆಯಿತು, ಪಕ್ಕದ ಮನೆಯಲ್ಲಿ ಬೆಂಕಿ ಹೊತ್ತಿ ಉರಿದರೂ ಏನಂತೆ! —ಎಂದೆಲ್ಲ ತರ್ಕಿಸುತ್ತ, ಚಡಪಡಿಸುತ್ತ ಮೇಜಿನ ಬಳಿಗೆ ಬಂದೆ! ಬಳ್ಳಿಯ ಬೆರಳು ನನ್ನ ತಲೆಯ ಮೇಲೆ ಆಡಿ ಸಂತೈಸಿತು!

ಈಗೀಗ ನಗರ ಜೀವನ ನನ್ನ ಮನಸ್ಸಿಗೆ ತುಂಬ ಮುಜಗರವನ್ನು

ತರುತ್ತಿದೆ! ತಮ್ಮ ಅನುಕೂಲಕ್ಕೆ ತಕ್ಕಂತೆ ಮಾಲಿಕರು ಕಟ್ಟಿಸಿದ ಬಾಡಿಗೆಯ ಮನೆಗಳು ಬೋನುಗಳಾಗುತ್ತಿವೆ! ವಿಸ್ತಾರವಾದ ಆವರಣವಿರುವುದಿಲ್ಲ, ಸದ್ದು ಗದ್ದಲಗಳಿಂದ ಪಾರಾಗಲು ಒಂದು ಕಡೆಯ ಕಿಟಕಿಯನ್ನು ಮುಚ್ಚಿ ಮತ್ತೊಂದು ಕಡೆ ತೆರೆದುಕೊಳ್ಳುವ ಅವಕಾಶವೂ ಇಲ್ಲ. ಒಳ್ಳೆಯ ನೆರೆ ಸಿಕ್ಕರೆ ಅದೊಂದು ಪೂರ್ವಜನ್ಮದ ಪುಣ್ಯ ವಿಶೇಷ! ಆದರೆ ಅದು ದುರ್ಲಭವಾದ ಮಾತು! ಅನು ಕೂಲಗಳನ್ನು ಅರಸುತ್ತ ಮನೆಯಿಂದ ಮನೆಗೆ ಸಾಗುತ್ತೇವೆ.

ಒಂದೊಂದು ಮನೆಯ ಬಿಡಲೊಂದೊಂದು ಕಾರಣ.
ಈಸಲದ ಅನುಭವ ; ಮನೆವಂತ ಒಳ್ಳೆಯವ ;
ಅವನ ಹೆಂಡತಿ, ಮಗಳು ? ಒಳ್ಳೆಯವರಿರಬೇಕು !
"ಮನೆಯ ಬಿಡಿ" ಎಂದವರು ನಮಗೆ ಹೇಳಿರಲಿಲ್ಲ,
ಅವರು ಮಾಡಿದ ಕೆಲಸ ಬೇರೆ !
ಓದು ಹತ್ತದ ಮಗಳ ದನಿಯಾದರೂ ಕುದುರಿ
ಮದುವೆ ಹತ್ತಿರವಾಗಲೆನುವ ಹಂಬಲಿನಿಂದ
ಸಂಗೀತ ಪಾಠವನು ಗೊತ್ತು ಮಾಡಿದರಷ್ಟೆ !
ಆ ಎಂಟು ತಿಂಗಳೂ ಮಳೆಗಾಲ, ಕಪ್ಪೆಗಳು !

(ಕೆ. ಎಸ್. ನರಸಿಂಹಸ್ವಾಮಿ)

ಒಂದೊಂದು ಮನೆಯಲ್ಲೂ ವಿಚಿತ್ರವಾದ ಅನುಭವಗಳು ; ಒಂದೊಂದು ಕಡೆ ಮನೆಯ ಮಾಲಿಕನಿಂದ, ಉಳಿದ ಕಡೆ ನೆರೆಹೊರೆಯಿಂದ.

ನಮ್ಮ ಎರಡನೆಯ ಮನೆಯ ಸ್ಥಿತಿಯೂ ಹೆಚ್ಚೇನು ಉತ್ತಮಗೊಳ್ಳಲಿಲ್ಲ. ಸಂಗೀತದ ಬೈರಿಗೆ, ಮಾತಿನ ಮೊರೆತ, ರೇಡಿಯೋಗಳ ಅಬ್ಬರ ಪಕ್ಕದ ಮನೆಯಿಂದ ಎದುರು ಮನೆಗೆ ಬದಲಾಯಿತು ಅಷ್ಟೆ! ಕಿಟಕಿಯೊಂದರಿಂದಲೇ ತೂರಿ ಬರುತ್ತಿದ್ದ ವರ್ಷಧಾರೆ ಈಗ ಬಾಗಿಲಿನಿಂದಲೂ ಬರತೊಡಗಿತು! ಎದುರು ಮನೆಯ ಪ್ರಾಧ್ಯಾಪಕರು ಮುಂಬಾಗಿಲ ಬಳಿಯೇ ಕುರ್ಚಿಯನ್ನು ಹಾಕಿ ಕುಳಿತು ತಮ್ಮ ಮಗನಿಗೆ ಗಣಿತ ಪಾಠವನ್ನೋ, ಇಂಗ್ಲಿಷನ್ನೋ ಹೇಳುತ್ತಿದ್ದರೆ ಹತ್ತಿರದ ಹತ್ತೆಂಟು ಮನೆಗಳವರೂ ಟಿಪ್ಪಣಿ ಮಾಡಿಕೊಳ್ಳಬಹುದಿತ್ತು! ಅವರು ಹೇಳು

ತ್ತಿದ್ದ ಪಾಠ ಹತ್ತಿರದಲ್ಲೇ ನಿಂತ ತಮ್ಮ ಮಗನಿಗಲ್ಲ, ಬೀದಿಯಲ್ಲಿ ಬೈಸಿಕಲ್ಲಿನ ಮೇಲೆ ಓಡಾಡುತ್ತಿದ್ದವರಿಗೆ, ಮನೆಗಳಲ್ಲಿ ಇನ್ನಾವುದೋ ಕೆಲಸ ಕಾರ್ಯಗಳಲ್ಲಿ ತೊಡಗಿದ್ದವರಿಗೆ !

ನಮ್ಮ ನೆರೆಮನೆಯ ರೈಲ್ವೆ ಅಧಿಕಾರಿ ಯಂತ್ರಯುಗದ ಅಂಚಿನಲ್ಲಿ, ವೈಜ್ಞಾನಿಕ ನಾಗರಿಕತೆಯ ಮೆರ್ಕ್ಯುರೀ ದೀಪದ ಬೆಳಕಿನಲ್ಲಿ ಮುಳುಗಿದ್ದರೂ ಅವರ ಪೂಜೆಯ ಕ್ರಮ ಮೂರು ಲೋಕಕ್ಕೂ ಮುಟ್ಟುತ್ತದೆ! ಅವರ ಮಂತ್ರ ಗಳ ಸದ್ದಿಗೆ ಭಗವಂತ ವೈಕುಂಠದಿಂದ ಎದ್ದು ಬಂದು, ಕೈಮುಗಿದು, ಭಕ್ತನ ಕಾಲಿಗೆ ಬಿದ್ದು "ಪ್ರಸನ್ನನಾದೆ ನಿನ್ನ ಮಂತ್ರ ಪಠನವನ್ನು ನಿಲ್ಲಿಸು ! ನನ್ನ ಕಿವಿಯೇನೂ ಕಿವುಡಲ್ಲ !" ಎಂದು ಬೇಡಿಕೊಳ್ಳುತ್ತಾನೆ!

ಹಿಂದುಗಡೆಯಲ್ಲೊಂದು ಮಹಡಿಯ ಮನೆಯಿದೆ! ವಕೀಲರ ಮಡದಿ ಯೊಬ್ಬರು ಎಂಟು ವರ್ಷದ ತಮ್ಮ ಮಗಳಿಗೆ ಶಿಸ್ತನ್ನು ಕಲಿಸುವ ವೈಖರಿಗೆ ನಾವು ಬೆರಗಾಗಿದ್ದೇವೆ. ದಿನಕ್ಕೆರಡು ಬಾರಿ ಆ ಮಗು ಬಾಯಿ ಬಾಯಿ ಬಡಿದುಕೊಳ್ಳುತ್ತ ಕಾಡುತ್ತ ಬೇಡುತ್ತ ಅಸಹಾಯಕವಾಗಿ ಮನೆಯಲ್ಲೆಲ್ಲ ಓಡಾಡುತ್ತದೆ. ಮುಂಬಾಗಿಲನ್ನು ಭದ್ರಪಡಿಸಿ, ಸೆರಗನ್ನು ಸೊಂಟಕ್ಕೆ ಬಿಗಿದು ಕಟ್ಟಿ. ಮೂಲೆಯಲ್ಲಿದ್ದ ಬೆತ್ತವನ್ನು ಕೈಗೆತ್ತಿಕೊಂಡು ಬೀದಿಯ ಮಕ್ಕಳೂ ಬೆದರಿ ಓಡುವಂತೆ ಆರ್ಭಟಿಸುತ್ತ ಅಬ್ಬರಿಸುತ್ತ 'ಮುಖ ಮೋರೆ'ಯನ್ನು ನೋಡದೆ ಆ 'ತಾಯಿ' ಚಚ್ಚುವ ಪರಿಗೆ ನಾವೂ ಬೆದರಿದ್ದೇವೆ.

ಇನ್ನೊಂದು ಬದಿಯಲ್ಲಿ ಸಂಗೀತಪ್ರಿಯರೊಬ್ಬರ ಮನೆಯಿದೆ. ಕಚೇರಿಗೆ ರಜ ಹಾಕಿಯಾದರೂ ರೇಡಿಯೋವಿನ ಮುಂದೆಯೇ ಅವರು ಕೂರಬೇಕು. ಧ್ವನಿ ಮುದ್ರಣ ಫಲಕಗಳ ಸಂಯೋಜನೆಗೂ ಅನುಕೂಲವಾದ ಅವರ ರೇಡಿಯೊ, ಎಲ್ಲ ನಿಲಯಗಳು ತಮ್ಮ ಕಾರ್ಯಕ್ರಮಗಳನ್ನು ನಿಲ್ಲಿಸಿದರೂ ಇಲ್ಲಿನ ಕೇಂದ್ರದಲ್ಲಿ ಸಂಗೀತದ ಪ್ಲೇಟುಗಳು ತಿರುಗುತ್ತಲೇ ಇರುತ್ತವೆ! ನಮ್ಮ ರೇಡಿಯೋ ಈಗ ಮೂಲೆಗೆ ಬಿದ್ದಿದೆ! ಅದರ ಅಗತ್ಯವೇ ನಮಗೀಗ ತೋರಿಬರುತ್ತಿಲ್ಲ. ಎಲ್ಲ ಮುಖ್ಯ ಕಾರ್ಯಕ್ರಮಗಳನ್ನೂ ನೆರೆಮನೆಯ ರೇಡಿಯೋವಿನಲ್ಲಿಯೇ ನಾವು ಕೇಳಿಕೊಳ್ಳು ತ್ತೇವೆ! ಅದೊಂದು ಯಂತ್ರ. ನಾವು ಹಾಕುವ ಯಾವ ಶಾಪವೂ ಅದಕ್ಕೆ ತಟ್ಟುವುದಿಲ್ಲ.

ನಮ್ಮ ನೆರೆಹೊರೆಯ ಬಂಧುಗಳು ನಿತ್ಯವೂ ನನಗೆ ಹಾದಿ ಬೀದಿಯಲ್ಲಿ ಸಿಕ್ಕು ತ್ತಾರೆ. ಕಾಲೇಜಿಗೆ ಹೊರಟಾಗಲೋ, ಬಾಗಿಲಲ್ಲಿ ನಿಂತಾಗಲೋ, ಕೂಗಿ ಮಾತಾಡಿಸಿ ಉತ್ತಮ ಸ್ನೇಹವನ್ನೇ ನಟಿಸುತ್ತಾರೆ—ಇದಾವುದನ್ನೂ ಹಚ್ಚಿ ಕೊಳ್ಳದೆ, ಸಮಾಜದಲ್ಲಿ ನಾನೇ ವಿಲಕ್ಷಣ ವ್ಯಕ್ತಿಯಾಗುತ್ತಿದ್ದೇನೆಯೋ ಎನಿಸು ತ್ತದೆ ಒಮ್ಮೊಮ್ಮೆ! ನಮ್ಮ ರೇಡಿಯೋ ನಮಗೆ ಮಾತ್ರ ಕೇಳುವಂತೆ ಹಾಕಿ ಕೊಳ್ಳಲು ನೆರೆಹೊರೆಯವರಾರೂ ಬಯಸಿದವರಲ್ಲ. ಹಾಡದಂತೆ, ಎದ್ದ ಧ್ವನಿ ಯಲ್ಲಿ ಮಾತಾಡದಂತೆ, ನೆರೆಮನೆಯ ಗೋಡೆಗಳು ಬಿರಿಯುವ ನಗೆಯನ್ನು ಚೆಲ್ಲ ದಂತೆ ಯಾರೂ ನಿರ್ಬಂಧಿಸಿಲ್ಲ! ಲೇಖನಿಗೆ ಗಂಟುಬಿದ್ದು. ಪುಸ್ತಕಕ್ಕೆ ಅಂಟಿ ಕೊಂಡು, ರಾತ್ರಿ ಎಷ್ಟೋ ಹೊತ್ತಿನವರೆಗೆ ದೀಪವನ್ನು ಉರಿಸುತ್ತ ಕೂರುವ ನನ್ನ ಬಗ್ಗೆಯೂ ಅವರಿಗೆ ಅನುಕಂಪ, ಕನಿಕರ ! ರಾತ್ರಿ ಹನ್ನೆರಡರೊಳಗೆ ತಮ್ಮ ಕಾರ್ಯಕ್ರಮಗಳಿಗೆ ಮಂಗಳವನ್ನು ಹಾಡಿ ವಿರಮಿಸುತ್ತಾರೆ !

ಹನ್ನೆರಡರ ಮೇಲೆ ಸಂಪೂರ್ಣ ಶಾಂತಿ ನಮ್ಮ ಕೇರಿಯಲ್ಲಿ ನೆಲಸುತ್ತದೆ ಎಂದು ಹೇಳುವ ಧೈರ್ಯವೂ ಸಾಲದು! ಮನೆಮನೆಯಲ್ಲೂ ಇರುವ ತೆಂಗಿನ ಮರಗಳ ಗುತ್ತಿಗೆಯನ್ನು ಹಗಲಿನಲ್ಲಿ ಕೋತಿಗಳು ವಹಿಸಿಕೊಂಡರೆ, ರಾತ್ರಿಯಲ್ಲಿ ಕಳ್ಳರು ಆ ಹೊಣೆಯನ್ನು ಹೊರುತ್ತಾರೆ. ಆ ಕಡೆಯ ಮನೆಯ ಮಾಲಿಕರು ಕಳ್ಳರನ್ನು ಹಿಡಿಯಲು ದೊಡ್ಡ ಸಾಹಸವನ್ನೇ ಮಾಡುತ್ತಾರೆ. ಕಿಟಕಿಯಲ್ಲಿ ತಲೆಹಾಕಿ ನಡುರಾತ್ರಿಯಲ್ಲೊಮ್ಮೊಮ್ಮೆ ಅವರು ತಾವಿನ್ನೂ ಎಚ್ಚರವಾಗಿರು ವುದನ್ನು ದೊಡ್ಡ ದನಿಯಲ್ಲಿ ಸೂಚಿಸುತ್ತಾರೆ! ಅವರ ಕೂಗಿಗೆ ನೆರೆಹೊರೆಯವರು ಎಚ್ಚರಗೊಂಡು ಮತ್ತೆ ಪಕ್ಕಕ್ಕೆ ಹೊರಳಿಕೊಳ್ಳುತ್ತಾರೆ !

ಒಂದು ನಟ್ಟಿರುಳಿನಲ್ಲಿ ಏಕೋ ತಟ್ಟನೆ ಎಚ್ಚರವಾಯಿತು ನನಗೆ ! ಹೊರಗೆ ಯಾರೋ "ಕಳ್ಳಾ! ಕಳ್ಳಾ!! ಏ ಕಳ್ಳಾ!!!" ಎಂದು ಬಡಬಡಿಸುತ್ತಿದ್ದರು ! ಎದ್ದು ದೀಪ ಹಾಕಿದೆ. ಎಲ್ಲ ಮನೆಯವರೂ ಎಚ್ಚರಗೊಂಡರು. ಕಿಟಕಿಯ ಬಳಿ ದೀಪಹಾಕದೆ ಹಾಗೆಯೇ ನಿಂತು ನೋಡುತ್ತಿದ್ದುದು ಅವರ ಮಾತುಗಳಿಂದಲೇ ಅರಿವಾಗುತ್ತಿತ್ತು. ಅವರು ಕೂಗುತ್ತಲೇ ಇದ್ದರು. ನೆರೆಹೊರೆಯವರು ಯಾರೂ ಹೊರಗೆ ಬರಲಿಲ್ಲ! ನಮ್ಮೂರಿನಿಂದ ಬಂದ ಬಂಧುಗಳನ್ನು ಏಳಿಸಿ ಕೊಂಡು ನಾನು ಹೊರಗೆ ಬಂದೆ! ಕಡೆಯ ಮನೆಯ ಮಾಲಿಕರು ಗೇಟಿನ ಬಳಿ ನಿಂತು ಗಡಗಡ ನಡುಗುತ್ತಿದ್ದರು! ಅವರ ಮಾತಿನ ಶಕ್ತಿಯೂ ಉಡುಗಿ

ಹೋಗಿತ್ತು! ನಿಲ್ಲುವ ತ್ರಾಣವೂ ಕುಗ್ಗಿ ಹೋಗಿತ್ತು. ನಾನು ಹೋದ ಎಷ್ಟೋ ಹೊತ್ತಿನ ಮೇಲೆ ಚೇತರಿಸಿಕೊಂಡರು !

''ಏನಾಯಿತು, ಕಳ್ಳನನ್ನು ನೋಡಿದಿರ ?'' ಎಂದು ಕೇಳಿದೆ.

"ಮರದ ಮೇಲೆ ಸರಸರ ಸದ್ದಾಯಿತು. ಎದ್ದು ಈಚೆಗೆ ಬರುವುದರಲ್ಲಿ ಓಡಿಹೋಗಿದ್ದಾನೆ...ನೀವೆಲ್ಲ ಸ್ವಲ್ಪ ನೋಡಿಕೊಬೇಕು ಸ್ವಾಮಿ, ನೆರೆಹೊರೆ! ಕೂಗಿಕೊಂಡರೆ ಒಬ್ಬರೂ ಈಚೆಗೆ ಬರುವುದಿಲ್ಲ !"

ಉದ್ವೇಗದಿಂದ ಮಾತನಾಡಿದರು ಕಡೆಯ ಮನೆಯವರು. ನಾವು ಸಮಾಧಾನಪಡಿಸಿ ಮರಳಿದೆವು !

'ನೆರೆ–ಹೊರೆ !'

ಆ ಮಾತನ್ನು ಕುರಿತು ನಾನು ಅನೇಕ ಬಾರಿ ಯೋಚಿಸಿದ್ದೇನೆ. ಯಾರ ಗೊಡವೆ ಯಾರಿಗೂ ಬೇಡ ಎಂಬಂತೆ ನಾವು ಇದ್ದುಬಿಡುವ ಪರಿ ಆಶ್ಚರ್ಯಕರ ವಾದುದು !

ನಮ್ಮ ನೆರೆಮನೆಯವರ ಹೆಸರೇನೆಂದು ನನಗೆ ಇನ್ನೂ ತಿಳಿಯದು ! ಅವರಿರುವುದು ಸೇಲ್ಸ್‌ಟ್ಯಾಕ್ಸ್ ಕಛೇರಿಯೋ ಇನಕಂ ಟ್ಯಾಕ್ಸ್ ಕಛೇರಿಯೋ ನಾನು ಹೇಳಲಾರೆ. ಅಕ್ಕಪಕ್ಕದಲ್ಲಿದ್ದೂ ನಾವು ಅಪರಿಚಿತರು ! ಆಗಂತುಕರು ! ನಮ್ಮ ನಮ್ಮ ಕಷ್ಟಕ್ಕೆ, ನಮ್ಮ ನಮ್ಮ ದುಃಖಕ್ಕೆ ನಾವೇ ಹೊಣೆ. ಯಾರೊಬ್ಬರೂ ನಮ್ಮ ನೆರವಿಗೆ ಬರುವುದಿಲ್ಲ. ಬೀದಿಯಲ್ಲಿಬ್ಬರು ಗುದ್ದಾಡುತ್ತಿದ್ದರೆ ಬಿಡಿಸಲು ಯಾರಿಗೆ ಆಸಕ್ತಿ ! ಅದೊಂದು ಪ್ರೇಕ್ಷಣೀಯ ದೃಶ್ಯವೆಂಬಂತೆ ನೋಡಿಕೊಂಡು ಮುಂದೆ ಸಾಗುತ್ತೇವೆ. ನೆರೆಯವರಿಗೆ ನಮ್ಮಿಂದ ಅಡ್ಡಿಯಾಗುತ್ತದೆ, ಆಘಾತ ವಾಗುತ್ತದೆ, ನೋವಾಗುತ್ತದೆ ಎಂಬ ಅಳುಕೂ, ವಿವೇಚನೆಯೂ ನಮ್ಮಿಂದ ದೂರವಾದಂತಿದೆ !

ನಾವು ನೆರೆಹೊರೆಯವರು ! ನಾವು ನಾಗರಿಕರು !

# ಮಾದನ ಮನೆ

ಅಂತು ನೆನ್ನೆಗೆ ನಮ್ಮೂರ ಮಾದನ ಮನೆಯ ಕಟ್ಟಡ ಪೂರ್ಣವಾಯಿತು. ತನ್ನ ಬಂಧು ಬಳಗದವರನ್ನೆಲ್ಲ ಕರೆಸಿ ಒಳ್ಳೆಯ ಊಟ ಹಾಕಿ ಹೊಸಮನೆಗೆ ಕಾಲಿಟ್ಟ. ಮನೆಯನ್ನು ಕಟ್ಟುವುದಕ್ಕೆ ಐನೂರು ವೆಚ್ಚವಾಗಿದ್ದರೆ ಹೊಸಮನೆಗೆ ಹೋಗುವಾಗ ಸಮಾರಂಭಕ್ಕೆ ಕೊನೆಯ ಪಕ್ಷ ಐವತ್ತನ್ನಾದರೂ ಬಳಸಿಕೊಂಡಿರ ಬೇಕೆಂದು ಅವರಿವರು ಅಂದಾಜು ಹಾಕುತ್ತಿರುವರಂತೆ. ತನ್ನ ದೊಡ್ಡ ಟಗರನ್ನು ಬಲಿ ಕೊಟ್ಟು ಭೈರವನ ಪೂಜೆ ಮಾಡಿದನೆಂದ ಮೇಲೆ ನೆಂಟರಿಷ್ಟರು ಬಹಳ ಮಂದಿಯೇ ಸೇರಿರಬೇಕು; ಅಷ್ಟೇ ಅಲ್ಲ ಊರಿನ ಪ್ರತಿ ಮನೆಯ ಯಜಮಾನರಿಗೂ ಆಹ್ವಾನ ಹೋಗಿತ್ತು. ಎಲ್ಲರೂ ತಪ್ಪದೆ ಬಂದಿದ್ದರು. ಆದರೆ ಹೆಂಚಿನ ಮನೆಯ ಕೆಂಚೇಗೌಡ ಮಾತ್ರ ಬರಲಿಲ್ಲ. ಊರಿನಲ್ಲಿದ್ದಿದ್ದರೆ ಆತನೂ ಬಂದೇ ಬರುತ್ತಿದ್ದ ನೇನೊ ! ಆದರೆ ಕಾರ್ಯಾರ್ಥವಾಗಿ ಬೆಂಗಳೂರಿಗೆ ಹೋಗಿರುವನೆಂದು ತಿಳಿದ ಮೇಲೆ ಮಾದ ಮತ್ತೆ ಕರೆಯುವ ಗೋಜಿಗೆ ಹೋಗಲಿಲ್ಲ. ತನ್ನ ಹೊಸ ಮನೆಯ ವೈಭವಕ್ಕೆ ಉಲ್ಲಾಸಗೊಂಡವನಾಗಿ ನೆನ್ನೆಯೆಲ್ಲಾ ಅವನು ಹೂವಿನ ಹಾಸಿನ ಮೇಲೆಯೇ ನಡೆದ. ತನ್ನ ಜೀವಮಾನದಲ್ಲಿ ದೊಡ್ಡದೊಂದು ಕಾರ್ಯ ವನ್ನು ಸಾಧಿಸಿದಂತೆ ಹೆಮ್ಮೆಯಿಂದ ನೆನ್ನೆ ಅತಿಥಿಗಳನ್ನು ಸತ್ಕರಿಸಿದ. ಗೃಹಪೂಜೆ ಗಾಗಿ ತನ್ನ ಮೆಚ್ಚಿನ ಟಗರನ್ನೇ ಬಲಿಕೊಟ್ಟಿರಬೇಕಾದರೆ ಅವನಿಗೆ ಹೊಸ ಮನೆಯ ಮೇಲಿನ ಅಭಿಮಾನವೆಷ್ಟೆಂಬುದು ವ್ಯಕ್ತವಾಗುತ್ತಿತ್ತು.

ಮಾದನ ಮನೆಯ ಸೌಂದರ್ಯಕ್ಕೆ ಅವನ ಹೆಂಡತಿ ಕೆಂಪಿ ಮೂಕಳಾಗಿ ಹೋಗಿದ್ದಾಳೆ ! ಬಾವಿಯ ಬಳಿ ಹೆಂಗಸರಿಗೆಲ್ಲ ಅದರ ವರ್ಣನೆಯೇ ಆಯಿತು ! ತಾನೇ ನಿಂತು ಕಟ್ಟಿಸಿದ ಗಂಡನೆದುರು ಅದರ ಚೆಂದವನ್ನು ಹೇಳಿಕೊಳ್ಳದಿದ್ದರೆ ಅವಳಿಗೆ ತೃಪ್ತಿಯಿಲ್ಲ ! ಆನಂದವಿಲ್ಲ !

ಎರಡು ಮೂರು ವರ್ಷದ ಕನಸು ಅದು ! ತಮ್ಮದಾಗಿ ಇರಲು ಒಂದು ಮನೆಯಿಲ್ಲ ; ತಾನೂ ಇತರರಂತೆ ತಲೆ ಎತ್ತಿ ತಿರುಗಲು ಸರಿಯಾದ ಮನೆಯಿಲ್ಲ.

ಆ ಹಳೆಯ ಮನೆಯಲ್ಲಿ ಬೆಂದು ಸಾಕಾಯಿತು. ಕೆಂಪಿಯನ್ನು ಕೈ ಹಿಡಿದ ಮೇಲಂತೂ ಆ ಮನೆಯನ್ನು ಆದಷ್ಟು ಬೇಗ ಬಿಡದಿದ್ದರೆ ಒಳ್ಳೆಯದಲ್ಲವೆಂದು ಮಾದನಿಗೆನಿಸದಿರಲಿಲ್ಲ. ಸಾಲದುದಕ್ಕೆ ಹಗಲಿರುಳು ಕೆಂಪಿಯ ಒತ್ತಾಯ ಬೇರೆ "ಈ ಹಾಳು ಮನೇಲಿ ನಾನೊಬ್ಬೇ ಇರಲಾರೆ.. ರಾತ್ರಿ ಹೊತ್ತು ಭಯಾ ಆಯ್ತದೆ....ನೀವು ಗದ್ದೇ ತಾವುಕೆ ಹೋದ್ರೆ ಬರೋದು ಸರೊತ್ತು .. "ಎಂದು ತುಂಬಿದ ಕಂಬನಿಯೊಡನೆಯೇ ಕೆಂಪಿ ಆರಂಭಿಸಿಬಿಡುತ್ತಿದ್ದಳು. ಅವಳ ಇಚ್ಛೆಯನ್ನು ಆದಷ್ಟು ಬೇಗ ನೆರವೇರಿಸಬೇಕೆಂದು ಮಾದನೂ ಯೋಚಿಸುತ್ತಲೇ ಇದ್ದ. ಅಲ್ಲದೆ ಮಳೆಗಾಲದಲ್ಲಿ ಆ ಮನೆಯಲ್ಲಿ ಮನುಷ್ಯ ಮಾತ್ರದವರು ವಾಸ ಮಾಡುವುದು ಅಸಾಧ್ಯವೆನಿಸುತ್ತಿತ್ತು! ಮಳೆಯ ನೀರೆಲ್ಲಾ ಮನೆಯಲ್ಲಿ ಹೊಳೆಯಾಗಿ ಹರಿಯುತ್ತಿತ್ತು. ತೊಲೆಗಳೆಲ್ಲ ಗೆದ್ದಲು ಮೇಯ್ದು— ಎಂದು, ಯಾವಾಗ ಕುಸಿದು ಬೀಳುವುವೋ ಎಂಬ ಭಯವನ್ನು ಮೂಡಿಸುತ್ತಿದ್ದವು. ಮಳೆಯ ಇರಿಚಲು ಕತ್ತಿ ಗೋಡೆಯ ಹೊರ ಪಾರ್ಶ್ವವನ್ನೆಲ್ಲ ಕೊಚ್ಚಿ ಅಲ್ಲಲ್ಲಿ ಕೊರೆದು ಕೃಶ ಮಾಡಿತ್ತು. ಹಳೆಯ ಕಾಲದ ಹೆಂಚುಗಳು, ಕುಂಟೆ ಹೊಡೆದ ಬಿದಿರ ದೆಬ್ಬೆಗಳು, ಕಪ್ಪು ಹಿಡಿದು ಸೀದುಹೋದ ಹುರಿಗಳು, ಛಾವಣಿಯಾವಾಗಲಾದರೂ ಕುಸಿದು ಬೀಳಬಹುದಿತ್ತು. ದೊಡ್ಡ ಗಾಳಿ ಒಮ್ಮೆ ಈ ದಿಕ್ಕಿನಲ್ಲಿ ಸಂಚಾರಮಾಡುವ ಕೃಪೆದೋರಿದ್ದರೆ ಈ ಮನೆ ಖಂಡಿತ ಅದರ ಹೊಡೆತಕ್ಕೆ ಬಲಿಯಾಗುತ್ತಿತ್ತು. ಆರಂಭಕ್ಕೆಟಕುವಷ್ಟು ಮಳೆಯಾಗುವುದು ದುಸ್ತರವೆನಿಸಿರುವ ಈ ಕಡೆ ಅತಿವೃಷ್ಟಿ ಯಾವಾಗಲೂ ಆಗಿಯೇ ಇಲ್ಲ. ಅಂತು ಮಾದನ ಹಳೆಯ ಮನೆಯ ಆಯಸ್ಸನ್ನು ಹೆಚ್ಚಿಸಲು ಇವೆಲ್ಲ ಸಹಕಾರಿಯಾದವು!

ಊರು ಹೊರಳಿತು. ಮಾದನ ನೆರೆಹೊರೆಯವರೆಲ್ಲ ಹೊಸ ಹೊಸ 'ಮಂದಾಳು'ಗಳನ್ನು ಕೊಂಡು ತಮ್ಮ ತಮ್ಮ ಯೋಗ್ಯತೆಗೆ ತಕ್ಕಂತೆ ಮನೆಗಳನ್ನು ಕಟ್ಟಿಕೊಂಡರು. ಊರಾದ ಊರೇ ಮುಂದೆ ಸರಿದ ಮೇಲೆ ಅಂಚಿನಲ್ಲಿದ್ದ ಮಾದನ ಮನೆ ಬಿಕೋ ಎನ್ನತೊಡಗಿತು. ಹೊಸ ಹೆಣ್ಣು ಕೆಂಪಿಯಂತೂ ಆ ಮನೆಯಲ್ಲಿರಲು ತುಂಬಾ ಅಂಜಿದಳು; ಅತ್ತಳು; ಗಂಡನಲ್ಲಿ ಮೊರೆಯಿಟಳು !

ಮಾದ ಒಬ್ಬಂಟಿಗ. ತನ್ನ ಸಂಸಾರಕ್ಕಾಗುವಷ್ಟು ಜಮೀನಿದ್ದರೂ ಅದರಲ್ಲಿ ಬರುವ ಆದಾಯ ಏನೇನೂ ಸಾಲದು. ಸರಿಯಾಗಿ ಮಳೆಯಾದರೆ ತನ್ನ ಮನೆಗಾಗಿ ಉಳಿಯುವಷ್ಟು ದಿನಸಿಯನ್ನೇನೋ ಬೆಳೆದು ತುಂಬಿಕೊಳ್ಳ ಬಲ್ಲ. ಆದರೆ ಕೈಗೆ ಬರುವ ಅಲ್ಪ ಹಣವೂ ಸಣ್ಣ ಪುಟ್ಟ ಸಾಲಗಳಿಗೆ ಸರಿಯಾಗಿ ಹೋಗುತ್ತದೆ. ಹೆಂಡತಿಗೆ ಸರಿಯಾದ ಒಂದು ಸೀರೆಯನ್ನು ತರಬೇಕಾದರೂ ಅವನು ಹಿಂದೆ ಮುಂದೆ ಯೋಚಿಸುವ ಸ್ಥಿತಿಯೊದಗುತ್ತದೆ. ಅನೇಕಬಾರಿ ಕುರಿ ಮೇಕೆಗಳನ್ನು ಸಾಕಬಹುದೆನಿಸುತ್ತದೆ! ಆದರೆ ಅವನ್ನು ಕಾಯುವುದಕ್ಕಾಗಿಯೇ ಒಬ್ಬ ಆಳನ್ನು ಇರಿಸಿಕೊಳ್ಳಬೇಕು. ಅವನಿಗೆ ಹಣ ಕೊಟ್ಟು ಇರಿಸಿಕೊಳ್ಳ ಬೇಕಾದ ಸ್ಥಿತಿಗೆ ಬರಬೇಕಾದರೆ ಸಂಸಾರ ಇನ್ನೂ ಕುದುರಿಕೊಳ್ಳ ಬೇಕಾಗಿದೆ. ಸಾಕಿದ್ದುದು ಒಂದೇ ಒಂದು ಟಗರು, ಒಂದು ಜೊತೆ ಎತ್ತು, ತಮ್ಮ ಮನೆಯಲ್ಲಿಯೇ ಬೆಳೆದ ಒಂದು ಎಮ್ಮೆ. ಕಳೆದ ಎರಡು ವರ್ಷಗಳಿಂದಲೂ ಬೆಳ್ಳೂರು ಹೋಟೆಲಿಗೆ ಹಾಲು ಹಾಕಿ, ಸಂತೆಯಲ್ಲಿ ಬೆಣ್ಣೆ ಮಾರಿ ಅಷ್ಟಿಷ್ಟು ಹಣ ಕೈಗೆ ಬಂದಿದ್ದರೂ ಅದು ಬರಿಯ 'ಮಂದಾಳು' ಕೊಳ್ಳಲು ಸಾಲುವಂತಿಲ್ಲ. ಎಷ್ಟೇ ಶ್ರಮ ಪಟ್ಟು ದುಡಿದರೂ, ಜೀರಹಳ್ಳಿಯ ಕೆರೆಗೆ ಎಷ್ಟೇ ಮಣ್ಣು ಹೊತ್ತರೂ ಮೂರು ವರ್ಷಕ್ಕೆ ಇನ್ನೂರು ರೂಪಾಯಿಗಳನ್ನು ಕೂಡಿಹಾಕುವುದು ದುಸ್ತರವಾಯಿತು. ಉಳಿದ ಮುನ್ನೂರಕ್ಕೆ ತೋರಿದ ಮಾರ್ಗ ಸಾಲ ಒಂದೇ !

ಇನ್ನು ಎರಡು ಮೂರು ವರ್ಷ ಇದೇ ಮನೆಯಲ್ಲಿ ಕಾಲ ತಳ್ಳಬಹುದಿತ್ತು. ಕೆಲವು ದಿನಗಳ ಹಿಂದೆ ಅಕಾಲ ಮರಣಕ್ಕೆ ತುತ್ತಾದ ಕೆಳಮನೆ ಕೆಂಗ ಗಾಳಿಯಾಗಿ ದ್ದಾನೆ ಎಂಬ ಗುಲ್ಲು ಎಲ್ಲೆಲ್ಲಿಯೂ ಕೇಳಿಬರತೊಡಗಿತು. ನೆರೆಹೊರೆಯೇ ಇಲ್ಲದ ಒಂಟಿ ಮನೆಯಲ್ಲಿ ಕೆಂಪಿಯೊಬ್ಬಳನ್ನೇ ರಾತ್ರಿಯ ವೇಳೆಯಲ್ಲಿ ಬಿಟ್ಟು ಹೊರಗೆ ಹೋಗುವುದು ಮಾದನಿಗೆ ಅಸಾಧ್ಯವಾಗಿ ತೋರಿತು. ಸೂರ್ಯ ಮುಳುಗು ವುದರಲ್ಲಿ ಅವನು ಮನೆಯನ್ನು ಸೇರಬೇಕಾಯಿತು. ಮನೆಯಲ್ಲಿ ದಂಪತಿಗಳಿಬ್ಬ ರಿದ್ದರೂ ಅಕ್ಕಪಕ್ಕದ ಹಾಳು ಮನೆಗಳು ಶೂನ್ಯತೆಯನ್ನು ಹೊತ್ತು ಭೀಕರವಾಗಿ ಗಾಳಿ ಬೀಸಿದಾಗ—ಮ್ಮೆ 'ಜುಂ' ಎನ್ನುತ್ತಿತ್ತು ಬಚ್ಚಲು ಮನೆಯಿಂದ ಧೈರ್ಯವಾಗಿ ನುಗ್ಗಿಬರುವ ಹೆಗ್ಗಣ ಯಾವುದಾದರೂ ಕುಕ್ಕೆಯನ್ನು ಉರುಳಿಸಿ ದರೆ ಎದೆ ನಡುಗುವುದು. ರಾತ್ರಿಯ ಮೌನದಲ್ಲಿ, ರಾತ್ರಿಯ ರೌದ್ರತೆಯಲ್ಲಿ

ಬೆಕ್ಕು ಗೋಡೆಯ ಮೇಲಿನಿಂದ 'ದಪ್' ಎಂದು ಧುಮುಕಿದರೆ ಮೈನವಿರೇಳು ವುದು. ಹೀಗಾಗಿ ಮಾದ-ಕೆಂಪಿಯರು ಅನೇಕ ವೇಳೆ ನಿದ್ರಾಶೂನ್ಯರಾಗಿ ಅನೇಕ ರಾತ್ರಿಗಳನ್ನು ಕಳೆಯಬೇಕಾಯಿತು. ಕೆಂಪಿ ಕೊನೆಕೊನೆಗೆ ಅತಿಯಾದ ಭಯವನ್ನು ವ್ಯಕ್ತಪಡಿಸಿದರೂ ಮಾದ ದಿಕ್ಕುತೋಚದಂತಾಗಿ ಕೆಂಪಿಯ ಮೇಲೆಯೇ ರೇಗಿ ಸುಮ್ಮನಾಗಿಬಿಡುತ್ತಿದ್ದನು.

ಅಂದು ಅಮಾವಾಸ್ಯೆ. ಊರಿನವರೆಲ್ಲ ನಿದ್ರೆಹೋಗಿ ಬಹಳಹೊತ್ತು ಕಳೆದುಹೋಗಿದೆ. ಏಕೊ ಇದ್ದಕ್ಕಿದ್ದ ಹಾಗೆಯೇ ಕೆಂಪಿಗೆ ಎಚ್ಚರವಾಯಿತು. ಕಗ್ಗತ್ತಲಲ್ಲಿ ಕಣ್ಣು ಬಿಡುವ ಧೈರ್ಯ ಅವಳಿಗಾಗಲಿಲ್ಲ. ಕಂಬಳಿಯನ್ನು ಭದ್ರವಾಗಿ ಎಳೆದುಕೊಂಡು ಗಂಡನ ಪಕ್ಕಕ್ಕೆ ಸರಿದು ಮಲಗಿಕೊಂಡಳು. ಭಯಂಕರ ನಿಶ್ಶಬ್ದವನ್ನು ಭೇದಿಸಿಕೊಂಡು ಏನೋ ಒಂದು ವಿಧವಾದ ಸದ್ದು ನೆರೆಮನೆಯಿಂದ ತೇಲಿ ಬಂದು ಸೂಜಿಯ ಮೊನೆಯಂತೆ ಚುಚ್ಚತೊಡಗಿತು. ಹಾಗೆಯೇ ಕಿವಿಗೊಟ್ಟಳು ಕೆಂಪಿ. ಯಾರೋ ಅಳುತ್ತಿರುವಂತಿದೆ! ಯಾರೂ ಇಲ್ಲದ ಹಾಳು ಮನೆಯಲ್ಲಿ ಅಳುತ್ತಿರುವವರಾರು ? ಬೆಚ್ಚಿದಳು ಕೆಂಪಿ ! ಗಂಡ ನನ್ನು ಏಳಿಸುವ ಧೈರ್ಯವೂ ಅವಳಿಗಾಗಲಿಲ್ಲ. ಭಯದಿಂದ ನಡುಗುತ್ತ ಆ ರಾತ್ರಿಯನ್ನು ನಿದ್ರಾಹೀನಳಾಗಿಯೇ ಕಳೆದಳು. ಬೆಳಗಾಗುತ್ತಿದ್ದ ಹಾಗೆಯೇ ರಾತ್ರಿಯ ವಿಷಯವನ್ನು ಕೇಳಿದ ಮಾದ "ಏನೂ ಇಲ್ಲ-ಅವೆಲ್ಲ ಸುಮ್ನೆ ಬ್ರಾಂತು !" ಎಂದು ಸಮಾಧಾನಪಡಿಸಿದನು. ಆದರೂ ಆ ಘಟನೆ ಅವನ ಮನಸ್ಸಿನ ಮೇಲೆ ತೀವ್ರ ಪರಿಣಾಮವನ್ನುಂಟುಮಾಡಿತು. ಅಂದೇ ಹೆಂಚಿನ ಮನೆಯ ಕೆಂಚೇಗೌಡರ ಜಗುಲಿಗೆ ತಡಿಕೆಯನ್ನು ಕಟ್ಟಿ ಅಲ್ಲಿಗೆ ಸಂಸಾರವನ್ನು ವರ್ಗಾಯಿಸಿದನು. ಕೆಲವೇ ದಿನಗಳಲ್ಲಿ ಹಳೆಯ ಮನೆ ಮಣ್ಣು ಪಾಲಾಗಿ ಹಾಳೂರ ಹಾಳು ಮನೆಗಳ ಗುಂಪಿಗೆ ಸೇರಿಹೋಯಿತು.

ಆದರೆ ಈಗ ! ಬೇರೆಯವರ ಹಂಗಿನಲ್ಲಿ ಹೆಚ್ಚುದಿನ ನಿಲ್ಲುವಂತಿಲ್ಲ. ಅವರಿಂದ ನಾಳೆ ಒಂದು ಮಾತು ಬರುವ ಮುನ್ನವೇ ಈ ಜಗುಲಿಯನ್ನು ಬಿಡುವುದೊಳ್ಳೆಯದು. ಅಲ್ಲದೆ ಜಗುಲಿಯಲ್ಲಿ ಊರೂರು ತಿರುಗುವ ಗೊಂಬೆ ರಾಮರಂತೆ ಕಾಲ ತಳ್ಳುತ್ತ ಬಂದರೆ ಗೌರವವೂ ಬರುವುದಿಲ್ಲ. ಆದಷ್ಟು

ಬೇಗ ತನ್ನದೇ ಆದ ಮನೆ ಸಿದ್ಧವಾಗಬೇಕು!—ಮಾದನ ತಲೆಯನ್ನು ನೂರೆಂಟು ಯೋಚನೆಗಳು ಕಾಡತೊಡಗಿದವು! ಕೆಂಪಿಯ ಒತ್ತಾಯವಂತೂ ಸುತ್ತಿಗೆಯ ಪೆಟ್ಟಿನಂತೆ ನಿತ್ಯವೂ ತಾಗತೊಡಗಿತು. ಒಂದಲ್ಲ ಒಂದು ವಿಧದಲ್ಲಿ ಅವಳು ತಮ್ಮ ಹಂಗಿನ ಬಾಳು ಎಷ್ಟು ಕೀಳುತರವೆಂಬುದನ್ನು ವ್ಯಕ್ತಪಡಿಸುತ್ತ ಗಂಡನನ್ನು ಎಚ್ಚರಿಸುತ್ತಲೇ ಬಂದಳು. ಮಾದನಿಗೂ ಅದು ಗೊತ್ತಿತ್ತು. ಹೊಸ ಮನೆಯನ್ನು ಕಟ್ಟಿಸುವ ಸಿದ್ಧತೆಗಳು ಭರದಿಂದ ಸಾಗಿದವು.

ಒಂದು ಎಕರೆ ಹೊಲ ಹೋಯಿತು! ಮನೆಯಲ್ಲಿ ಕರೆಯುತ್ತಿದ್ದ ಎಮ್ಮೆ ಹೋಯಿತು—ತನಗಿರುವ ಒಂದೇ ಎಕರೆ ಗದ್ದೆಯನ್ನು ಆಧಾರ ಮಾಡಿ ಮುನ್ನೂರು ರೂಪಾಯಿ ಸಾಲವನ್ನು ಪಡೆದುದಾಯಿತು. ಮನೆಯನ್ನು ಕಟ್ಟಲು ಉತ್ತಮ ನೆಲೆಯಲ್ಲಿ ಸ್ಥಳವೂ ದೊರೆಯಿತು ...ಮೂರು ನಾಲ್ಕು ತಿಂಗಳಲ್ಲಿಯೇ ಮನೆ ಎದ್ದು ನಿಂತಿತು. ಮಾದ ಕೆಂಪಿಯರ ಹೃದಯವನ್ನು ಹಿಗ್ಗಿಸಿತು.

"ಗಂಜಿ ಕುಡ್ದು ಬಾಳಿದರೂ ನಮ್ಮ ಮನೆ ಅಂತ ಆಯ್ತು ...ಸರೀಕರ ಮುಂದೆ ಮಾನ ಉಳ್ಕೊಂತು!"

ತೃಪ್ತಿಯ ನಿಟ್ಟುಸಿರು ಬಿಟ್ಟರು ದಂಪತಿಗಳು!

....ಕೆಂಚೇಗೌಡ ಬೆಂಗಳೂರಿನಿಂದ ಬರುವುದರಲ್ಲೇ ಮಾದನ ಸಂಸಾರ ಹೊಸ ಮನೆಯನ್ನು ಅಲಂಕರಿಸಿತ್ತು. ಜೋಯಿಸರಿಂದ ಶುಭ ಮುಹೂರ್ತವನ್ನು ಕೇಳಿಯೇ ಹೊಸ ಮನೆಗೆ ಬಂದಿದ್ದರು. ಅಂದಿನ ಪ್ರಮುಖ ಪಾತ್ರ ವಹಿಸಬೇಕಾಗಿದ್ದವನವನು. ಅವನು ಬರುವ ನಿರೀಕ್ಷೆಯಿದ್ದುದರಿಂದ ಮಾದ ತನ್ನ ಕಾರ್ಯದಲ್ಲಿ ಮುಂದುವರಿದ. ಆದರೆ ಕೆಂಚೇಗೌಡ ಅಂದು ಬರಲೇ ಇಲ್ಲ! ಏನು ತಿಳಿದುಕೊಂಡಾನೋ ಎಂಬ ಅಳುಕು ಇವನಿಗೆ ತಲೆದೋರಿತು. ಅಲ್ಲದೆ ಮನೆ ಕಟ್ಟಲು ಸ್ಥಳವನ್ನು ದೊರಕಿಸಿಕೊಟ್ಟವನೂ ಕೆಂಚೇಗೌಡನೆ! ಮನೆಯನ್ನು ಕಟ್ಟಲು ನೆರವಾದವನೂ, ಸಾಲ ಕೊಡಿಸಲು ಮುಂದೆ ಬಂದವನೂ, ಕಷ್ಟ ಕಾಲದಲ್ಲಿ ಇರಲು ಸ್ಥಳ ಕೊಟ್ಟವನೂ ಅವನೆ! ಅವನಿಲ್ಲದಿರುವಾಗಲೇ ಹೊಸ

ಮನೆಗೆ ಬಂದು ಬಿಟ್ಟಿದ್ದಾನೆ! ಮಾದನ ಹೃದಯ ಕೆಂಚೇಗೌಡನ ಆಗಮನ ವನ್ನು ಕೇಳಿ ಆಳುಕಿನಿಂದ ತುಂಬಿ ಹೋಯಿತು. ಮಾತಾಡಿಸಿ ಬರೋಣವೆಂದು ಆ ಕಡೆ ಬಂದವನು, ಮನೆಯ ಬಾಗಿಲು ಮುಚ್ಚಿದ್ದುದರಿಂದ ಜಗುಲಿಯಲ್ಲೇ ಕುಳಿತುಕೊಂಡ, ಸ್ವಲ್ಪ ಹೊತ್ತಿನಲ್ಲಿಯೇ ಕೆಂಚೇಗೌಡ ಹೊರಗೆ ಬಂದ.

ಮಾದನೇ ಮೊದಲು ಮಾತಾಡಿಸಿದ.

ಕೆಂಚೇಗೌಡ ಒರಟಾಗಿ ಉತ್ತರಕೊಟ್ಟ.

ಧ್ವನಿಯಲ್ಲಿ ಬದಲಾವಣೆಯಿತ್ತು, ಬಿಗಿಯಿತ್ತು. ಮಾದನ ಊಹೆ ನಿಜ ವಾಯಿತು. ಕೆಂಚೇಗೌಡನ ಮನಸ್ಸು ಕೆಟ್ಟಿದೆ, ಅವನು ಬೇಸರಗೊಂಡಿದ್ದಾನೆ —ಎಂಬುದನ್ನು ಅವನ ಮಾತಿನ ಧಾಟಿ ಮತ್ತೂ ಒತ್ತಿ ಹೇಳಿತು!

"ಈಗ ಬೇರೆ ಮಾತಾಡಿ ಪ್ರಯೋಜ್ನಿಲ್ಲ....ಸುಮ್ಕೆ ಹೊಂಟೋಗು.... ನಂಗೆ ಬೇರೆ ಕೆಲ್ಸ ಅದೆ!'' ಎಂದು ಕೆಂಚೇಗೌಡ ಸರಸರನೆ ಒಳಗೆ ಹೊರಟೇ ಹೋದ.

ಮಾದನಿಗೆ ಮುಖಭಂಗವಾದಂತಾಯಿತು. ಹೃದಯ ಕಿರಿದಾಯಿತು. ಅಪಶಕುನವನ್ನು ಕಂಡವನಂತೆ ಮನೆಗೆ ಹಿಂದಿರುಗಿದ.

ಕೆಂಚೇಗೌಡ ದಿನದಿನಕ್ಕೆ ಮಾದನನ್ನು ದೂರವಿಡುತ್ತಲೇ ಬಂದ. ದಾರಿ ಯಲ್ಲಿ ಸಿಕ್ಕರೂ ಸರಿಯಾಗಿ ಮಾತನಾಡಿಸುತ್ತಿರಲಿಲ್ಲ. ತನ್ನ ಮನೆಯಲ್ಲಿ ಏನಾ ದರೂ ವಿಶೇಷವಿದ್ದರೆ ಮಾದನನ್ನು ಊಟಕ್ಕೆ ಕರೆಯದಿರುತ್ತಿರಲಿಲ್ಲ. ಈಗ ಅದೂ ನಿಂತು ಹೋಯಿತು.

ಮಾದ ತನ್ನ ಹೊಸ ಮನೆಯ ಪುಟ್ಟ ಜಗುಲಿಯ ಮೇಲೆ ಕುಳಿತಿದ್ದಾನೆ. ಆಗ ತಾನೆ ಮಧ್ಯಾಹ್ನದ ಊಟ ಮುಗಿದುದರಿಂದ ಹಾಯಾಗಿ ಗಾಳಿಯನ್ನು ಕುಡಿಯುತ್ತ ಚೌಕದಿಂದ ಬೀಸಿಕೊಳ್ಳುತ್ತಿದ್ದಾನೆ. ಕೆಂಪಿ ಗಂಡ ಊಟ ಮಾಡಿದ 'ತಣಿಗೆ'ಯನ್ನು ಹೊರಗೆ ಎರಚುತ್ತಿದ್ದಾಳೆ. ನಾಯಿಯೊಂದು ಬಂದು ಉಳಿದ ಮುದ್ದೆಯ ಮುರುಕನ್ನು ಆಯ್ದುಕೊಳ್ಳುತ್ತಿದೆ. ಇದ್ದಕ್ಕಿದ್ದಂತೆಯೇ

ಎದುರುದಿಕ್ಕಿನಿಂದ ಬುಡುಬುಡುಕೆಯವನೊಬ್ಬ ಕಾಣಿಸಿಕೊಂಡ!

ಕೈಯಲ್ಲಿ ಬುಡುಬುಡುಕೆಯಿದೆ; ಹೆಗಲಲ್ಲಿ ಜೋಳಿಗೆಯಿದೆ; ತಲೆಯಲ್ಲಿ ಹರಿದ ಬಣ್ಣ ಬಣ್ಣದ ಪೇಟವಿದೆ. ಕೊರಳಿನಲ್ಲಿ ಅಡ್ಡವಸ್ತ್ರವೂ ಇದೆ. ಸೊಗಸಾದ ಕಚ್ಚೆಯನ್ನೇ ಹಾಕಿದ್ದಾನೆ ಭಿಕ್ಷಕ್ಕೆ ಹೊರಟವನಂತೆ ತೋರುತ್ತಾನೆ. ಆದರೂ ಭಿಕ್ಷೆಯನ್ನು ಕೇಳಲಿಲ್ಲ. ಬುಡುಬುಡುಕೆಯನ್ನು ಆಡಿಸುತ್ತ ' ಈ ಮನೆಗೆ ಜಯವಾಗಲಿ' ಎಂದು ಹೇಳುತ್ತ ನೇರವಾಗಿ ಮಾದನ ಕಡೆಗೆ ಬರುತ್ತಿರುವುದನ್ನು ಕಂಡು ಕೆಂಪಿಗೆ ಆಶ್ಚರ್ಯವೇ ಆಯಿತು.

ಮಾದನ ಕಿವಿಯಲ್ಲಿ ಏನನ್ನೋ ಆ ಬುಡುಬುಡಿಕೆಯವನು ಉಸುರಿದ. ಮತ್ತೆ ನಿಲ್ಲಲಿಲ್ಲ; ಹೊರಟೇ ಹೋದ. ಮಾದ ಗರಬಡಿದವನಂತೆ ಕುಳಿತುಬಿಟ್ಟ. ಮಾತುಗಳು ಅಸ್ಪಷ್ಟವಾಗಿ ಕೇಳಿದರೂ ವಿಷಯುವೇನೋ ಭಯಂಕರವಾದುದೇ ಎಂದು ಕೆಂಪಿ ನಡುಗಿದಳು. ಚೊಚ್ಚಲು ಬಸುರಿಯಾದ ತನಗಾವ ವಿಪತ್ತು ಕಾದಿದೆಯೋ ಎಂದು ಅವಳು ಮಮ್ಮಲ ಮರುಗಿದಳು.

ಯೋಚಿಸಿದಷ್ಟೂ ವಿಷಯ ಭೀಷಣವಾಗಿ ತೋರತೊಡಗಿತು ಮಾದನಿಗೆ. ಇಂಥ ಸನ್ನಿವೇಶಗಳೊದಗಿದರೆ ಕೆಂಚೇಗೌಡನಲ್ಲಿ ಹೋಗಿ ಹೇಳಿಕೊಳ್ಳುತ್ತಿದ್ದ. ಆದರೆ ಅವನು ಈಗ ಯಾವ ಮಾತಿಗೂ ಕಿವಿಗೊಡುವ ಸ್ಥಿತಿಯಲ್ಲಿಲ್ಲ. ಊರಿನಲ್ಲಿ ಇವನಿಗೆ ಆಪ್ತರಾದವರು ಇನ್ನಾರೂ ಇಲ್ಲ. ಇದ್ದರೂ ಇವನಿಗೆ ಆಶ್ರಯ ನೀಡುವಂಥ ಉದಾರಿಗಳಂತೂ ಇಲ್ಲವೇ ಇಲ್ಲ. ದೆವ್ವ ಬಾಗಿಲು ಕಾಯುತ್ತಿದೆ ಎಂದ ಮೇಲೆ ಆ ಮನೆಯಲ್ಲಿ ಖಂಡಿತ ನಿಲ್ಲಕೂಡದೆಂದು ಮಾದ ನಿರ್ಧರಿಸಿದನಿಂತಷ್ಟೂ ತನ್ನ ಮಡದಿಗೆ ಅಪಾಯವೆಂಬುದೂ ಅವನಿಗೆ ಅರಿವಾಗದಿರಲಿಲ್ಲ.

ಮಾರನೆಯ ದಿನವೇ ಕೆಂಪಿಯನ್ನು ತೌರುಮನೆಗೆ ಕಳಿಸಿ ಬಂದು, ತಾನು ಯಾರದೋ ಜಗುಲಿಯಲ್ಲಿ ಮಲಗಿದ. ಬಾಗಿಲಿಗೆ ಬೀಗಮುದ್ರೆಯಾಗಿದ್ದುದರಿಂದ ಧೈರ್ಯವಾಗಿಯೇ ಮಲಗಿದ. ಆದರೆ ಮರುದಿನ ಬೆಳಿಗ್ಗೆ ಹೋಗಿ ನೋಡುವಲ್ಲಿ ಬಾಗಿಲಲ್ಲಿ ಎರಡು ಮೂರು ಮೂಳೆಗಳು ಬಿದ್ದಿರುವುದು ಗೋಚರಿಸಿತು.

ನಾಯಿಗಳು ಕಚ್ಚಿ ತಂದ ಮೂಳೆಗಳವಲ್ಲವೆಂಬುದು ಅವನಿಗೆ ಸ್ಪಷ್ಟವಾಗಿ ಗೊತ್ತಾಯಿತು. ಆದರೆ ಆ ವಿಷಯವನ್ನು ಬಹಿರಂಗಪಡಿಸದೆ, ಮೂಳೆಗಳನ್ನು ತೆಗೆದುಕೊಂಡು ಹೋಗಿ ತಿಪ್ಪೆಗೆಸೆದು ಬಂದ.

ಮರುದಿನವೂ ಹಾಗೆಯೇ ಆಯಿತು. ತಿಪ್ಪೆಯಲ್ಲಿದ್ದ ಮೂಳೆಗಳು ಮತ್ತೆ ಬಾಗಿಲಿಗೆ ಬಂದು ಬಿದ್ದಿದ್ದ ವಿಚಿತ್ರವನ್ನು ನೋಡಿ ಭಯ ಆಶ್ಚರ್ಯಗಳೊಡನೆ ಮಾದ ತತ್ತರಿಸಿದ. ಪೂಜೆ ಹಾಕಿಸಲು ಹದಿನೈದು ರೂಪಾಯಿಗಳಾದರೂ ಬೇಕಾಗುತ್ತದೆ. ಅದಕ್ಕೂ ಅವನಲ್ಲಿ ಹಣವಿಲ್ಲ. ಬುಡುಬುಡುಕೆಯವನನ್ನು ಸಂಧಿಸಿ ಕೇಳಲು "ಆ ಮನೆಯನ್ನು ಬಿಡದ ಹೊರತು ಮುಂದೆ ಕ್ಷೇಮವೇ ಇಲ್ಲ" ಎಂದು ಹೇಳಿಬಿಟ್ಟ.

ಮನೆಯನ್ನು ಬಿಡಲೇಬೇಕಾಯಿತು. ಆದರೆ ಎಲ್ಲಿಗೆ ಹೋದಾನು? ಯಾರನ್ನು ಕೇಳಿಯಾನು? ಬೀದಿಯಲ್ಲಿ ಪಾತ್ರೆ ಪದಾರ್ಥಗಳನ್ನಿಟ್ಟುಕೊಂಡರೂ ಸರಿಯೆ -ಮನೆಯನ್ನು ಮಾತ್ರ ಬಿಡದೆ ವಿಧಿಯಿಲ್ಲ. ಜಗುಲಿಯುಳ್ಳ ಮೂರು ನಾಲ್ಕು ಮಂದಿ ಪುಣ್ಯಾತ್ಮರನ್ನು ಕೇಳಿದ. ಎಲ್ಲರೂ ತಲೆ ಒಗೆದುಬಿಟ್ಟರು.

ಕೆಂಚೇಗೌಡನ ಕೋಪವಿನ್ನೂ ಆರಿಯೇ ಇಲ್ಲ. ತನ್ನೊಡನೆ ಅಷ್ಟು ವಿಧೇಯನಾಗಿ ನಡೆದುಕೊಳ್ಳುತ್ತಿದ್ದವನು, ತಾನಿಲ್ಲದ ವೇಳೆಯಲ್ಲಿ ಹೊಸ ಮನೆಗೆ ಹೋಗಿದ್ದಾನೆ. ಅವನಲ್ಲಿ ಅಷ್ಟು ಗೌರವ, ಕೃತಜ್ಞತೆಗಳಿದ್ದರೆ ಆ ಕಾರ್ಯವನ್ನೇ ಮುಂದೆ ಹಾಕಬಹುದಿತ್ತು. ತನ್ನ ಮೇಲಿನ ನಿರ್ಲಕ್ಷ್ಯದಿಂದಲೇ ಹಾಗೆ ಮಾಡಿದ್ದಾನೆ! ಎಂದು ಕೆಂಚೇಗೌಡ ಹಲ್ಲು ಹಲ್ಲು ಕಡಿದುಕೊಂಡ. ಅವನ ಮಡದಿ ಆ ಕೋಪದ ಜ್ವಾಲೆಗೆ ತುಪ್ಪ ಸುರಿದು ಮತ್ತೂ ಉಜ್ವಲಗೊಳಿಸಿದಳು. ತಮ್ಮ ಮನೆಗೆ ತಿರುಗಿಕೊಂಡಿದ್ದ ಹುಡುಗ ಈಗ ಹೊಸ ಮನೆಯಲ್ಲಿ ಸಂಸಾರ ಹೂಡಿರುವುದು ಅವಳಿಗೆ ಸಹಿಸಲೇ ಇಲ್ಲ! ಕೆಂಪಿಗೂ ಆಕೆಗೂ ಆಗಾಗ ಸ್ವಲ್ಪ ಮಾತುಕತೆ ನಡೆಯುತ್ತಿತ್ತು. ತನ್ನ ಜಗಲಿಯಲ್ಲೇ ಇದ್ದರೆ ಕೆಂಪಿಯನ್ನು ಹಂಗಿಸಿ ಮಾತಾಡಿ ಅವಳಿಗೆ ಸಂಕಟಪಡಿಸಬಹುದಿತ್ತು; ಆದರೆ ಅವಳು ಯಾರಿಗೇನೂ ಕಡಿಮೆಯಲ್ಲವೆಂಬಂತೆ ಸ್ವತಂತ್ರಳಾಗಿಬಿಟ್ಟರೆ! ಯಾರೂ ಮಾತಾಡಿಸು

ವಂತಿಲ್ಲ! ಮಾದ ಒಳ್ಳೆಯ ಹುಡುಗ, ಆದರೆ ಕೆಂಪಿಗೆ ಸೊಕ್ಕು ಆಕೆಯ ದೃಷ್ಟಿಯಲ್ಲಿ!

—ಆಗಾಗ ಗಂಡನ ಬುದ್ಧಿಯನ್ನು ಕೆಡಿಸುತ್ತಲೇ ಬಂದಳು ಕೆಂಚೇಗೌಡನ ಧರ್ಮಪತ್ನಿ!

ಕೆಂಚೇಗೌಡ ಈಗತಾನೆ ಮನೆಗೆ ಹೋದುದನ್ನು ಮಾದನೇ ನೋಡಿದ. ಹಿಂದೆಯೇ ಹೋದರೂ 'ಇಲ್ಲ' ಎನ್ನಿಸಿಕೊಂಡು ಬರಬೇಕಾಯಿತು. ಈ ರೀತಿಯ ಅವಮಾನ ಎರಡು ಮೂರು ಬಾರಿಯಾಗಿದೆ. ಆದರೂ ಕೆಂಚೇಗೌಡನನ್ನು ದೂರಮಾಡಿಕೊಳ್ಳಲು ಮಾದನಿಗೆ ಇಷ್ಟವಿಲ್ಲ. ಊರೆಲ್ಲ ತನ್ನ ಕಡೆಯಿದ್ದರೂ ಅವನೊಬ್ಬನಿದ್ದಂತಾಗುವುದಿಲ್ಲವೆಂದು ಮಾದನಿಗೆ ಗೊತ್ತು. ಕೆಂಚೇಗೌಡನಂಥ ಉದಾರಮತಿ ವಿಶಾಲ ಪ್ರವೃತ್ತಿಯವನು ಹೀಗೇಕಾದನೆಂದು ಮಾದ ಸದಾ ಚಿಂತಿಸುವುದೇ ಆಯಿತು. ಇನ್ನೂ ಮೂರು ತಿಂಗಳು ಅದೇ ಜಗಲಿಯಲ್ಲಿದ್ದರೂ ಹೀಗೆ ಮಾಡಬಾರದಿತ್ತೇನೊ ಎಂದುಕೊಂಡು ಖಿನ್ನನಾಗಿ ತಿರುಗಾಡುತ್ತಿದ್ದರೂ, ಕೆಂಚೇಗೌಡ ಇತ್ತ ತಿರುಗಲೇ ಇಲ್ಲ.

ಮತ್ತೆ ಎರಡು ಮೂರು ದಿನಗಳು ಕಳೆದುಹೋದುವು. ಎದುರು ಮನೆಯ ಜಗುಲಿಯಲ್ಲಿ ಮಲಗಿ ನಿದ್ದೆ ಹೋಗುತ್ತಿದ್ದ ಅವನ ಹೆಸರನ್ನು ಹಿಡಿದು ಯಾರೋ ಕೂಗಿದಂತಾಯಿತು! ಅದೂ ಅವನ ಹೊಸ ಮನೆಯ ಬಾಗಿಲಿನಲ್ಲಿಯೇ ಕೂಗಿದಂತಾಯಿತು. ಮಾದ ಗಾಬರಿಯಾಗಿ ಎದ್ದು ಕುಳಿತ. ಸುತ್ತಲೂ ನೋಡಿದ. ಯಾರೂ ಕಾಣಲಿಲ್ಲ. ಆದರೆ ಕೆಳಗೆ ಇಳಿದು ಹೋಗಿ ನೋಡುವ ಧೈರ್ಯ ಮಾತ್ರ ಅವನಿಗಾಗಲೇ ಇಲ್ಲ.

ಪೂಜೆ ಹಾಕಿಸಲು ಮತ್ತೊಂದು ಕುರಿಯನ್ನು ಕಡಿಯಲೇ ಬೇಕು. ಮರಿ ಊಟವೆಂದರೆ ಬರಬಾರದ ನೆಂಟರೆಲ್ಲಾ ಬರುತ್ತಾರೆ. ಏನಿಲ್ಲವೆಂದರೂ ಮತ್ತೆ ಐವತ್ತು ರೂಪಾಯಿಗಳ ಖರ್ಚು ತಗುಲುತ್ತದೆ....ಆದರೆ ಮಾದ ಮೊದಲಿನ ಸಾಲದಿಂದಲೇ ಚೇತರಿಸಿಕೊಳ್ಳುತ್ತಿದ್ದಾನೆ! ಆ ಸಾಲವನ್ನು ತೀರಿಸುವ ಮಾರ್ಗವನ್ನು ಹಗಲಿರುಳೂ ಚಿಂತಿಸುತ್ತಿದ್ದಾನೆ! ಸಾಲ ಮಾಡಿ ಮನೆ ಕಟ್ಟಿಸಿದ ಎಂಬ ಅಪವಾದವನ್ನು ಬೇರೆ ಹೊತ್ತುಕೊಂಡಿದ್ದಾನೆ. ಮತ್ತೆ ಯಾರಿಂದಲೂ ಒಂದು ಬಿಲ್ಲೆಯೂ ಸಾಲ ದೊರೆಯುವ ನಿರೀಕ್ಷೆ ಅವನಿಗೆ ತೋರಲಿಲ್ಲ. ಮನೆಯನ್ನು

ಬಿಟ್ಟು, ಪೂಜೆಹಾಕಿಸದಿದ್ದರೆ ಯಾರಾದರೂ ಒಬ್ಬರು ಬಲಿಯಾಗಿಯೇ ಆಗುತ್ತಾ ರೆಂದು ಆ ಬುಡುಬುಡುಕೆ ಹೇಳುತ್ತಿದ್ದಾನೆ. ಅಷ್ಟೇ ಅಲ್ಲದೆ ಆ ಮನೆಗೆ ಮತ್ತೆ ಶಾಂತಿ ಮಾಡಿಸದಿದ್ದರೆ ಏಳಿಗೆಯೇ ಇಲ್ಲವೆಂದು ಸಾರಿಸಾರಿ ಹೇಳಿದ್ದಾನೆ!

ಮಾದ ತಲೆಯ ಮೇಲೆ ಕೈಹೊತ್ತುಕೊಂಡು ಯೋಚನೆಯ ಭಾರದಿಂದ ಕುಸಿದು ಕುಳಿತಿದ್ದ. ಮುಂದಿನ ಪರಿಹಾರಕ್ಕೆ ಯಾವ ಸೂಕ್ತ ಹಾದಿಯೂ ತೋರದೆ ವಿಮುಖನಾಗಿ ಕುಳಿತಿದ್ದ—ಎಲ್ಲಿಯೋ ಹೋಗಿದ್ದ ಕೆಂಚೇಗೌಡ ಅವನ ಮನೆಯ ಮುಂದೆಯೇ ಹಾಯ್ದುದನ್ನು ಕಂಡು ಮಾದ ಅವನ ಹಿಂದೆ ಓಡಿದ

ದೀನನಂತೆ ಕೂಗುತ್ತ ಅವನನ್ನು ಹಿಂಬಾಲಿಸಿದ. ಕೇಳಿಸಿಯೂ ಕೇಳಿಸ ದಂತೆ ಹೋಗುತ್ತಿದ್ದ ಕೆಂಚೇಗೌಡ. ಆದರೆ ಮಾದ ಬಿಡಲಿಲ್ಲ. ಹೋಗಿ ಅಡ್ಡ ಗಟ್ಟಿದ!

ಕೆಂಚೇಗೌಡ ಮಾತಾಡಲಿಲ್ಲ. ಗಂಭೀರವಾಗಿ ನಡೆದ. ಅವನ ಹೃದಯ ದಲ್ಲಿಯೂ ದ್ವಂದ್ವವೆದ್ದಿರಬೇಕು. ಮಗುವಿನಂತೆ ತನ್ನ ಮುಂದೆ ತತ್ತರಿಸು ತ್ತಿರುವ ಮಾದನ ಕಡೆಗೆ ಒಂದು ಕರುಣೆಯ ಕಿರಣವನ್ನು ಬೀರಿ ಮುಂದೆ ನಡೆದ ....ಮಾದ ಅಷ್ಟಕ್ಕೆ ಸಂತುಷ್ಟನಾಗಿ ಹಿಂದಿರುಗಿದ...

ಈಗ ಮಾದ ಮತ್ತೆ ಕೆಂಚೇಗೌಡನ ಜಗುಲಿಗೆ ಬಂದಿದ್ದಾನೆ. ಹೊಸ ಮನೆಗೆ ಪೂಜೆ ಹಾಕಿಸಲು ಸಿದ್ಧತೆಗಳೆಲ್ಲಾ ನಡೆಯುತ್ತಿವೆ. ಕೆಂಚೇಗೌಡನೇ ಧನಸಹಾಯ ಮಾಡಿದನೆಂದಮೇಲೆ ಅಂದಿನ ಔತಣದಲ್ಲಿ ಮುಖ್ಯಪಾತ್ರವೂ ಅವನದೇ ಆಯಿತು. ಬಂಧುಗಳ ನಡುವೆ ಠೀವಿಯಿಂದ ಕುಳಿತು ಊಟ ಮಾಡು ವುದೆಂದರೆ ಕೆಂಚೇಗೌಡನಿಗೆ ಅಪಾರ ಹೆಮ್ಮೆ. ಅವರೆಲ್ಲ ಇವನ ಕಡೆ ಪ್ರಶಂಸೆಯ ಮಾತುಗಳನ್ನೆಸೆಯುತ್ತಾರೆ. ಮಾದನನ್ನು ಉದ್ಧಾರಮಾಡಿದವನೆಂದು ಮೈ ಯುಬ್ಬುವ ಮಾತುಗಳನ್ನಾಡುತ್ತಾರೆ. ಇಂಥ ಮಾತುಗಳು ಬಂದಾಗ ಮತ್ತೊಂದು ಲೋಟ ನೀರು ಕುಡಿದು, ಮೀಸೆಯ ತುದಿಯ ನೀರನ್ನು ವರೆಸಿ ಕೊಳ್ಳುತ್ತಾನೆ ಕೆಂಚೇಗೌಡ !

ಈ ಬಗೆಯ ಮರ್ಯಾದೆಯನ್ನು ಅಂದು ತಪ್ಪಿಸಿದನಲ್ಲ 'ಹಾಳು ಮಾದ' ಎಂದು ಕೋಪಗೊಂಡಿದ್ದ ಅಷ್ಟೆ!

ರಸ್ತೆಯಂಚಿನ ಕತ್ತಿಯ ಮರದ ಪಕ್ಕದಲ್ಲಿ ಮಾದನ ಪುಟ್ಟಮನೆ ಚುಂಚನ ಗಿರಿ ಜಾತ್ರೆಗೆ ಹೋಗುವ ಯಾತ್ರಿಕರನ್ನು ಕರೆಯುತ್ತದೆ. ಸುತ್ತಲೂ ಕಲ್ಲು ಚಪ್ಪಡಿಯನ್ನು ನಿಲ್ಲಿಸಿದ್ದಾನೆ. ಮೇಲೆ ಹಳೆಯ ಕಾಲದ ಹಳ್ಳಿಯ ಹೆಂಚೇ ಆದರು ಸೋರದಂತೆ ದಟ್ಟವಾಗಿ ಹೆಂಚನ್ನು ಹೊದಿಸಿದ್ದಾನೆ. ಒಂದು ನಡು ಮನೆ, ಅಡ್ಡಗೋಡೆಯ ಇನ್ನೊಂದು ಬದಿಯಲ್ಲಿ ಚಿಕ್ಕ ಅಡಿಗೆಯ ಕೋಣೆ; ಕೆಂಪಿ, ಹಸಿಯಕಲ್ಲು, ಮಂತಿನಕೋಲು, ಬಾನದಸಾಲು, ಕಲಗಚ್ಚು; ಸೌದೆ ಮೂಲೆಗಳಿಗೆಲ್ಲ ಅಲ್ಲೇ ಜಾಗಮಾಡಿಕೊಂಡಿದ್ದಾಳೆ. ಎರಡು 'ಹೋಗೊಲೆಯ' ದೊಡ್ಡ ಒಲೆಯನ್ನೇ ಹಾಕಿದ್ದಾಳೆ.

ಸಂಜೆಯ ದೀಪ ಅಡ್ಡಗೋಡೆಯ ಮೇಲೆ ಉರಿದು ನಡುಮನೆ ಅಡಿಗೆ ಮನೆಗಳೆರಡಕ್ಕೂ ಬೆಳಕನ್ನು ನೀಡುತ್ತದೆ. ನಡುಮನೆಯ ಬೀಸುವಕಲ್ಲು, ಒರಳು ಕಲ್ಲು, ಸಂದೂಕಗಳನ್ನು ಒಳಗೊಂಡಂತೆ ಎರಡು ಕಲ್ಲುಕಂಬಗಳು ನಿಂತಿವೆ. ತೊಟ್ಟಿಲನ್ನು ಕಟ್ಟುವುದಕ್ಕೆ ಬೀಸುವ ಕಲ್ಲಿನ ಪಕ್ಕದಲ್ಲೆ ಕಂಬಳಿಯ ನೆರಿಕೆಯನ್ನು ಕಟ್ಟಿಕೊಳ್ಳಬೇಕು.

ನಡುಮನೆಯ ಇನ್ನೊಂದು ಬದಿಯಲ್ಲಿ ಸಣ್ಣಕೊಟ್ಟಿಗೆ, ಹೊರಗೆ ಪುಟ್ಟ ಜಗಲಿಗಳು. ಜಾತ್ರೆಯ ಜನಕ್ಕೆ ನೀರಿನ ಕಡಾಯವನ್ನು ಇಡಲು ಈ ಜಗ ಲಿಯೇ ಸಾಕು. ಮನೆಯೊಂದನ್ನು ಕಟ್ಟಲು ಮಾದ ಏಳು ಕೆರೆಯ ನೀರು ಕುಡಿಯಬೇಕಾಯಿತು, ನಿಜ. ಆದರೆ ಅವನ ಮಕ್ಕಳು ಮೊಮ್ಮಕ್ಕಳ ಕಾಲದ ವರೆಗೆ ಇನ್ನೊಂದು ಮನೆಯ ಗೋಜು ಅವನಿಗಿಲ್ಲ. ಆ ನೆಮ್ಮದಿ, ಆ ಸಂತೋಷ ಅವನಿಗೆ!

# ಅಗೋಚರ ಬಂಧುಗಳು

ಗಾಳಿ ಕಾಣಿಸಿಕೊಳ್ಳಬೇಕಾದರೆ ದೆವ್ವಗಣ್ಣಿನವರಿಗೆ ಮಾತ್ರ ಎಂದು ನಮ್ಮೂರಿನವರ ನಂಬಿಕೆ. ದೇವಗಣ್ಣಿನವರಿಗೆ ಅವು ಕಾಣಿಸಿಕೊಳ್ಳುವುದಿಲ್ಲ. ನಾನು ದೇವಗಣ್ಣಿನವನಿರಬೇಕು. ಹಳ್ಳಿಯ ಕಾಡುಮೇಡುಗಳಲ್ಲಿ ಹಗಲು ಮುಚ್ಚುಂಜೆಗಳಲ್ಲಿ, ಇರುಳು ಹೊತ್ತಾರೆಗಳಲ್ಲಿ ಅಲೆದಿದ್ದೇನೆ. ನಮ್ಮ ಮಿತ್ರರೊಬ್ಬರಿಗೆ ಬೇಟೆಯ ಹುಚ್ಚು. ಅವರ ತಂದೆಯವರ ಕಾಲದ ಒಳ್ಳೆಯ ಬಂದೂಕು ಅವರ ಮನೆಯಲ್ಲಿದೆ. ಅದನ್ನು ಹಿಡಿದು ಅವರು ಅಮಾವಾಸ್ಯೆಯ ರಾತ್ರಿಗಳಲ್ಲೂ ಅಲೆಯದ ಸ್ಥಳವಿಲ್ಲ. ಆಗಾಗ ಊರಿಗೆ ಹೋಗುವ ನಾನೂ ಅವರೊಡನೆ ಸೇರಿಕೊಳ್ಳುತ್ತೇನೆ. ಕಾಲಿನಿಂದ ಕುತ್ತಿಗೆಯವರೆಗೆ ವಿಚಿತ್ರವಾಗಿ ವೇಷಹಾಕಿಕೊಂಡು ಉದ್ದುದ್ದ ಟಾರ್ಚುಗಳನ್ನು ಹಿಡಿದು ಬಂದೂಕನ್ನು ಹೆಗಲಲ್ಲಿ ಹೊತ್ತು ಸಾಗುವ ನಮ್ಮನ್ನು ಕಂಡರೆ ಪಿಶಾಚಿಗಳಿಗೂ ಭಯವಾಗಬಹುದು. ಅವು ಸಂಚರಿಸುವ ತೋಟಗಳಲ್ಲಿ ರಾತ್ರಿಗಳನ್ನು ಕಳೆದಿದ್ದೇವೆ. ಅವು ನೆಲಸಿರುವ ಮರಗಳಲ್ಲಿ ನಡುರಾತ್ರಿಯಲ್ಲಿ ಹತ್ತಿ ಕುಳಿತು ಕಿರುಬಗಳಿಗಾಗಿ ಕಾದಿದ್ದೇವೆ. ಅವು ಸುಳಿದಾಡುವ ತಿಟ್ಟುಗಳಲ್ಲಿ ಮೊಲಗಳನ್ನು ಅರಸುತ್ತ ನೆಲದ ಪೊದೆಪೊದೆಯನ್ನೂ ಶೋಧಿಸಿದ್ದೇವೆ. ಗಾಳಿಗಳು ನಮ್ಮ ಕಣ್ಣಿಗೆ ಬೀಳಲಿಲ್ಲ. ನಮ್ಮನ್ನು ಯಾವ ವಿಚಿತ್ರ ರೀತಿಯಲ್ಲೂ ಹೆದರಿಸಲಿಲ್ಲ. ಅವನ್ನು ಕಾಣಬೇಕು, ಕಂಡು ಮಾತಾಡಬೇಕು, ಮಂತ್ರವಾದಿಗಳಂತೆ ಅವುಗಳ ಕೂದಲನ್ನು ಕಿತ್ತು ವಶಪಡಿಸಿಕೊಳ್ಳಬೇಕು. ಅವುಗಳನ್ನು ಒಳ್ಳೆಯ ಕಾರ್ಯಗಳಿಗೆ ಬಳಸಿಕೊಳ್ಳಬೇಕು—ಎಂದೆಲ್ಲ ನಾವು ಮಾತಾಡಿಕೊಂಡು ಪಿಶಾಚಿಗಳನ್ನು ಹುಡುಕಿಕೊಂಡು ಹೋಗಿದ್ದುದೂ ಉಂಟು. ಆದರೆ ನಮ್ಮ ಮೇಲೆ ಅವಕ್ಕೆ ಕರುಣೆ ಬರಲಿಲ್ಲವೊ, ಇಲ್ಲವೇ ಕನಿಕರದಿಂದ ದೂರ ಸರಿದವೊ, ಅಥವಾ ಇನ್ನಾವುದೋ ಅವಕಾಶವನ್ನು ಕಾಯುತ್ತಿರುವುವೋ—ಅಂತು ನಮ್ಮ ರಾತ್ರಿಯ ಸಂಚಾರಗಳೆಲ್ಲ ಈವರೆಗೆ ವಿಫಲವಾಗಿ ಹೋದವು.

ಒಮ್ಮೆ ನಮ್ಮೂರ ಕರಿಕಲ್ಲ ಗುಡ್ಡದಲ್ಲಿ ಮೊಲದ ಬೇಟೆಗೆ ಹೊರಟೆವು. ಮೋದರಕಲ್ಲನ್ನು ದಾಟಿ ಆಚೆಯ ಗೊಲ್ಲರ ಹಟ್ಟಿಯ ಕಣಿವೆಯ ಹೊಲಗಳಲ್ಲಿ

ಸುತ್ತಾಡುತ್ತಿದ್ದರೆ ಅಲ್ಲೊಂದು ಇಲ್ಲೊಂದು ಮೊಲಗಳು ಕಣ್ಣಿಗೆ ಬೀಳುತ್ತವೆ. ಕರಿಕಲ್ಲು ಗುಡ್ಡದ ದಾರಿಯಲ್ಲಿಯೇ ಅಲ್ಲಿಗೆ ಹೋಗಬೇಕು. ರಾತ್ರಿಯ ಹನ್ನೊಂದರ ವೇಳೆಗೆ ಊರಿನವರೆಲ್ಲ ಮಲಗಿದ ಮೇಲೆ ನಮ್ಮ ಯಾತ್ರೆ ಆರಂಭವಾಯಿತು. ಭಯಂಕರ ಆಕಾರದಲ್ಲಿ ಬೆಟ್ಟದೆತ್ತರ ಬೆಳೆದು ನಿಂತಿರುವ ನಮ್ಮೂರ ಸಾಲು ಹಿಪ್ಪೆಯ ಮರಗಳ ಕೆಳಗೆ ಹಗಲಿನಲ್ಲಿ ಹೋಗಲೂ ಜನ ಹೆದರುತ್ತಾರೆ. ಕರಿಕಲ್ಲು ಗುಡ್ಡದ ಸಮೀಪವಿರುವ ಕೊನೆಯ ಹಿಪ್ಪೆಯ ಮರದಲ್ಲಿ ಹಗಲಿನಲ್ಲೇ ಎಷ್ಟೋ ಮಂದಿ ಗಾಳಿಗಳನ್ನು ಕಂಡು ಬೆದರಿ ಬಂದಿದ್ದಾರೆ. ಆ ಮರದ ಮೂಲಕವೇ ಕಾಳಯ್ಯನ ಕಟ್ಟೆಯ ಏರಿಯನ್ನು ಬಳಸಿಕೊಂಡು ಕಣಿವೆಯ ದಾರಿಯಲ್ಲಿ ಸಾಗುತ್ತಿದ್ದೆವು. ಕರಿಕಲ್ಲು ಗುಡ್ಡದ ಕುರುಚಲು ಗಿಡಗಳನ್ನು ದಾಟಿಕೊಂಡು ಸ್ವಲ್ಪ ಮುಂದೆ ಹೋದರೆ ಊರು ಮರೆಯಾಗುತ್ತದೆ. ಸುತ್ತಲೂ ಭಯಂಕರವಾದ ಗಿರಿಗಾಡು ಆವರಿಸಿ ನಿಲ್ಲುತ್ತದೆ. ಹಗಲಿನಲ್ಲಿ ದನಕುರಿಗಳ ಹುಡುಗರನ್ನು ಹೊರತು ಇರುಳಿನಲ್ಲಿ ಯಾರೂ ಅಲ್ಲಿ ಸಂಚರಿಸರು. ಆ ದಾರಿಯಲ್ಲಿಯೇ ನಾವು ಹೊರಟು ಬಸರಿಯ ಮರದ ಸಮೀಪಕ್ಕೆ ಬಂದೆವು. ನಮ್ಮ ಎಡಬದಿಯಲ್ಲಿ ಏನೋ ಸಪ್ಪಳವಾದಂತಾಗಿ ಹಾಗೆಯೇ ನಿಂತೆವು!

ದಟ್ಟವಾದ ಕತ್ತಲು ಬೆಟ್ಟಗುಡ್ಡಗಳನ್ನು ಅವುಚಿಕೊಂಡು ಕವಿದಿದೆ. ಜಿಯ್ಯೋ ಎಂದು ಅಲ್ಲೆಲ್ಲೊ ಮಿಡತೆಗಳು ರಾತ್ರಿಯ ಭೀಕರತೆಯನ್ನು ಹೆಚ್ಚಿಸಿವೆ. ಭೋ ಎಂದು ಬೀಸುವ ಗಾಳಿ ಒಮ್ಮೊಮ್ಮೆ ಗರುಡಗಲ್ಲಿನ ಸಿಟ್ಟುಸಿರಿನಂತೆ ಕೇಳಿ ಬರುತ್ತಿದೆ! 'ಕೃಕ್ ಕೃಕ್ ಕೃಕ್' ಎಂಬ ವಿಚಿತ್ರ ಶಬ್ದ ಕೇಳ ಬಂದ ಕಡೆಗೆ ನಮ್ಮ ಕಿವಿ ನಿಮಿರಿತು. ಕತ್ತಲೆಯಲ್ಲೂ ಆಳ ಆಳಕ್ಕಿಳಿದು ನಮ್ಮ ಕಣ್ಣು ಸುತ್ತೆಲ್ಲ ಅರಸಿತು. ಟಾರ್ಚಿನ ಬೆಳಕು ಬರಿಯ ಬೆಟ್ಟ, ಗಿಡ, ಹೊದರುಗಳ ನೆತ್ತಿಯನ್ನು ತಡಕಿ ಸುಮ್ಮನಾಯಿತು. ಯಾರೂ ಕಣ್ಣಿಗೆ ಗೋಚರಿಸಲಿಲ್ಲ.

ಮುಂದೆ ಹತ್ತು ಹೆಜ್ಜೆ ಸಾಗಿರಬಹುದು. ಮತ್ತೆ ಅದೇ ಸದ್ದು ಪೊದೆಯ ಮರೆಯಿಂದ ತೇಲಿ ಬಂದಿತು. ನಮ್ಮ ಕುತೂಹಲ ಭಯದ ದವಡೆಗೆ ಬೆರಳಿಡತೊಡಗಿತು. ಹತ್ತಿರದಲ್ಲೇ ಕೇಳಿಬರುವ ಸಪ್ಪುಳಕ್ಕೆ ನ್ನೆ

ಬೆವರಿಕ್ಕಿತು. ಪಿಶಾಚಿಗಳನ್ನು ನಮ್ಮವರು 'ಗಾಳಿ' ಎಂದು ಕರೆದರು. ಬೀಸುವ ಗಾಳಿಯಂತೆ ಅವು ಕಣ್ಣಿಗೆ ಕಾಣಿಸದ ಅಗೋಚರ ಜೀವಿಗಳೇ ಸ). ಶಬ್ದ ಮಾತ್ರದಿಂದ ಅವರ ಇರುವಿಕೆಯನ್ನು ಗುರುತಿಸತೊಡಗಿದೆವು. ಇಂದಾದರೂ ಒಂದು ಅನುಭವ ನಮ್ಮ ಬರಿಯ ಬತ್ತಳಿಕೆಯನ್ನು ಸೇರಿತಲ್ಲ ಎಂಬ ಸಮಾಧಾನ ವಾದರೂ 'ಗಾಳಿ' ತೀರ ಸಮೀಪವೇ ಆದಾಗ ಎದೆ ಜಲ್ಲೆಂದಿತು. ನಮ್ಮ ತರ್ಕವಿತರ್ಕಗಳು ದೂರ ಸರಿದವು. ಆ ರಾತ್ರಿಯ ಭೀಕರ ಮೌನದಲ್ಲಿ, ಜನವಿಹೀನ ಕಂದರ ಮಾರ್ಗದಲ್ಲಿ ಮತ್ತೆ 'ಕ್ಯಕ್ ಕ್ಯಕ್ ಕ್ಯಕ್' ಎಂಬ ಶಬ್ದ ಸ್ಪಷ್ಟವಾಗಿಯೇ ಕೇಳಬಂದಿತು. ಕಲ್ಲಿನ ಮೇಲೆ ಒಳ್ಳೆಯ ಬಗನಿಯ ದೊಣ್ಣೆ ಯನ್ನು ಕುಟ್ಟಿದಂಥ ಶಬ್ದ ಅದು.

ಕೈಯಲ್ಲಿ ಬಂದೂಕವಿದೆ, ಇಬ್ಬರ ಕೈಯಲ್ಲೂ ಟಾರ್ಚುಗಳಿವೆ. ಮನೆ ದೇವರಿರುವ ಚುಂಚನಗಿರಿಯ ಶಿಖರ ಹತ್ತಿರದಲ್ಲೇ ಕಾಣುತ್ತಿದೆ. ಊರ ದೇವರು ಹನುಮಂತರಾಯನ ಗುಡಿಯ ತುದಿಯೂ ಇಲ್ಲಿಗೆ ಹಗಲಿನಲ್ಲಿ ಕಾಣುತ್ತದೆ. ಇಬ್ಬರಿದ್ದೇವೆ, ಎಂದೂ ಯಾವ ಕತ್ತಲಿಗೂ ಹೆದರದವರು ಇಂದೇಕೆ ಧೈರ್ಯಗೆಡಬೇಕೆಂದು ಆ ಸಪ್ಪುಳವನ್ನು ಶೋಧಿಸಿಬಿಡುವ ನಿರ್ಧಾರಕ್ಕೆ ಬಂದೆವು !

''ಯಾರು ? ಯಾರವರು ?" ಕೂಗಿ ಮಾತಾಡಿಸಲು ಪ್ರಯತ್ನಿಸಿದೆವು. ಉತ್ತರ ಬರಲಿಲ್ಲ. ಶಬ್ದ ಬಂದ ಕಡೆಗೆ ಹೆಜ್ಜೆ ಹಾಕಿದೆವು. ಪೊದೆಯ ಮರೆಯಿಂದ ಮತ್ತೆ 'ಕ್ಯಕ್ ಕ್ಯಕ್' ಶಬ್ದ ಕೇಳಿಬಂದಿತು. ಯಾವುದೋ ಅಸ್ಪಷ್ಟವಾದ ಬಿಳಿಯ ಆಕೃತಿಯೊಂದು ಪೊದೆಯ ಮರೆಯಲ್ಲಿ ಚಲಿಸಿದಂತಾ ಯಿತು ಟಾರ್ಚಿನ ಬೆಳಕಿನಲ್ಲಿ. ಗಾಳಿಗಳು ಕಾಣಿಸಿಕೊಳ್ಳುವುದು ಹೀಗೆಯೇ ಎಂದು ಕೇಳಿದ್ದ ನಾವು ಇಂದು ನಾವೇ ಗಾಳಿಯ ತೋಳಿಗೆ ವಸ್ತುವಾದೆವೆಂದು ಭಾವಿಸಿದೆವು.

"ಯಾರು, ಮಾತಾಡಿ! ಇಲ್ಲದಿದ್ದರೆ ಬಂದೂಕ ಹಾರಿಸಬೇಕಾಗುತ್ತದೆ!" ಮಿತ್ರರು ಧೈರ್ಯವಾಗಿ ಕೂಗಿದರು. ಹಿಂದಿನಿಂದ ಬಂದು ಆ ಗಾಳಿ ಬಂದೂ ಕನ್ನೇ ಕಿತ್ತುಕೊಂಡರೆ ಏನು ಗತಿ ! ಎಂಬ ಅಳುಕು ನನ್ನ ಮನಸ್ಸನ್ನು

ಕಾಡತೊಡಗಿತು. ಆದರೂ ಅವರು ಆ ಶಬ್ದ ಬಂದ ಕಡೆಗೆ ಬಂದೂಕನ್ನು ಗುರಿಹಿಡಿದರು.

"ಈಗಲಾದರೂ ಮಾತ್ನಾಡೀರೊ ಇಲ್ಲವೊ !" ಮತ್ತೆ ಗರ್ಜಿಸಿದರು ಅವರು.

"ಅಯ್ಯೊ ನಾವು ಕಾಣಪ್ಪೊ ಹಾರಿಸಿ ಗೀರಿಸಿ ಬಿಟ್ಟೀಯ !" ಯಾರೋ ಮಾತಾಡಿದಂತಾಯಿತು ! ಮಾನವ ಧ್ವನಿಯನ್ನು ಕೇಳಿ ನಮ್ಮ ಧೈರ್ಯ ಮತ್ತೆ ಗೂಡಿಗೆ ಬಂದಿತು; ಅತ್ತ ಹೆಜ್ಜೆ ಇಟ್ಟೆವು. ನೆಲದ ಮೇಲೆ ಹತ್ತಾರು ಗಜ ಉದ್ದಕ್ಕೆ ಕೋಲಿನ ಆಧಾರದ ಮೇಲೆ ನಿಲ್ಲಿಸಿದ ಸಣ್ಣ ಬಲೆಯೊಂದು ಕಂಡಿತು. ಯಾರೋ ಮೊಲದ ಬೇಟೆಯವರೆಂದು ಸ್ಪಷ್ಟವಾಯಿತು. ಪೊದೆಗಳ ಮರೆಯಿಂದ ಅಲ್ಲೊಂದು ಇಲ್ಲೊಂದು ಆಕೃತಿಗಳು ಮಾತಾಡಿದುವು.

"ಶಬ್ದ ಮಾಡದೆ ಹೋಗ್ರಪ್ಪ ಮೊಲ ಓಡೋಯ್ತದೆ ! ನಾವು ವಡ್ಡರ ಹಳ್ಳಿಯೋರು !"

ಪರಿಚಿತ ಧ್ವನಿಗಳು ಸ್ಪಷ್ಟವಾದವು. ಗಾಳಿ ಇಂದೂ ನಮಗೆ ಕೈ ಕೊಟ್ಟಿತು. ಭಯಂಕರ ಅನುಭವದ ಮೂಲಕ ಅದನ್ನು ಕಂಡೆವು, ಎಂಬ ಹೆಮ್ಮೆ ನಮ್ಮದಾಗುತ್ತಿತ್ತು; ಆದರೆ ವಡ್ಡರ ಹಳ್ಳಿಯ ಬೇಟೆಗಾರರನ್ನು ಕಂಡಾಗ ಹೆಜ್ಜೆಗೆ ಧೈರ್ಯ ಮೂಡಿದರೂ, ನಿರಾಶೆಯ ಸುಳಿಯೊಂದು ಅಂತರಂಗದಲ್ಲಿ ಆಡುತ್ತಲೇ ಇತ್ತು !

ಗಾಳಿಗಳನ್ನು ನೇರವಾಗಿ ಕಂಡವರು, ಕಂಡು ಹೆದರಿದವರು, ಹೆಗಲಲ್ಲಿ ಹೊತ್ತು ಬಂದವರು ನಮ್ಮೂರಿನಲ್ಲಿ ಬೇಕಾದಷ್ಟು ಜನರಿದ್ದಾರೆ. ಅವರ ಅನುಭವಗಳನ್ನು ಕೇಳುವುದೇ ಒಂದು ಮೋಜು ಚಿಕ್ಕವರು ದೊಡ್ಡವರು ಎನ್ನದೆ ಅದರ ಬಗ್ಗೆ ಭಯ ಕಾತರಗಳನ್ನು ವ್ಯಕ್ತಪಡಿಸುತ್ತಾರೆ. ಹೆಂಗಸರು ಮಕ್ಕಳು ರಾತ್ರಿಯ ಕಾಲದಲ್ಲಿ ಗಾಳಿಗಳ ಸುದ್ದಿಯನ್ನು ಮಾತಾಡಲೂ ಹೆದರುತ್ತಾರೆ. ಗಂಡಸರಲ್ಲಿ ಕೆಲವು ಅಂಜುಕುಳಿಗಳನ್ನುಳಿದರೆ ಬಹುಮಂದಿ ಧೈರ್ಯಶಾಲಿಗಳು. ಗಾಳಿಗಳನ್ನು ಅವರು ಒಂದು 'ತುಚ್ಛ' ವಸ್ತುವಿನಂತೆ ಕಾಣುತ್ತಾರೆ. ನಾಯಿಯ ರೂಪದಲ್ಲೋ, ಹಂದಿಯ ರೂಪದಲ್ಲೋ ಅದು

ಕಾವಲು ಕಣಿವೆಯಲ್ಲಿ ಕಾಣಿಸಿಕೊಂಡರೆ 'ಲೇ ಥೂ...' ಎಂದು ಅದ್ದಲಿಸಿ ಧೈರ್ಯವಾಗಿ ಅವರು ಬಂದುಬಿಡುತ್ತಾರೆ. ಅವರ ಧೈರ್ಯವನ್ನು ನೋಡಿಯೇ ಗಾಳಿಗಳು ಗಂಡಸರನ್ನು ಹೆಚ್ಚಾಗಿ ಕಾಡುವುದಿಲ್ಲ. ಅವಕ್ಕೆ ಗಂಡಸರು ಹೆದರುತ್ತ ಕೂರಲೂ ಆಗುವುದಿಲ್ಲ. ರಾತ್ರಿಯಲ್ಲಿ ಗದ್ದೆಗೆ ನೀರು ನೋಡಬೇಕು; ಮಬ್ಬಿನಲ್ಲೇ ಗೊಬ್ಬರ ಗೋಡಿಗೆ ಗಾಡಿ ಕಟ್ಟಬೇಕು; ಸಂತೆ, ಜಾತ್ರೆಗೆ ಹೋದರೆ ಸರಿಹೊತ್ತಾದರೂ ಊರಿಗೆ ಹಿಂದಿರುಗಬೇಕು; ಹೊಲಕ್ಕೆ ನೆಲಗಡಲೆ ಹಾಕಿದರೆ ರಾತ್ರಿಯೆಲ್ಲ ನರಿ, ಮೊಲಗಳನ್ನು ಕಾಯಬೇಕು. ಬೆಳೆ ಬಂದಾಗ ಹೊಲದಲ್ಲಿ ಮಲಗಬೇಕು, ತೆಂಗಿನ ತೋಟಕ್ಕೆ ಆಗೊಮ್ಮೆ ಈಗೊಮ್ಮೆಯಾದರೂ ಹೋಗಿ ಬರಬೇಕು ಗಾಳಿಗಳಿಗೆ ಅಂಜುತ್ತ ಕುಳಿತರೆ ಅವರ ಬದುಕಿನ ಬಂಡಿಯೇ ಉರುಳದು.

ಗಾಳಿಗಳ ಬಗ್ಗೆ ಇಂಥ ಉಪೇಕ್ಷೆಯನ್ನು ಕೆಲ ಪುರುಷರು ತೋರಿದರೂ ತಮಗಾದ ಅನುಭವಗಳನ್ನು ಊರಿಗೆ ಬಂದು ಹೆಂಗಸರು ಮಕ್ಕಳ ಮುಂದೆ ಅವರು ರಸವತ್ತಾಗಿ ಬಣ್ಣಿಸುತ್ತಾರೆ. ಅದು ಅವರ ಧೈರ್ಯ ಸಾಹಸದ ಪ್ರತೀಕ. ಗಾಳಿಗಳನ್ನು ಕಂಡೂ ಹೆದರದೆ ಬಂದ, ಬೈದು ಬಂದ ಕೆಚ್ಚನ್ನು ಮೆಚ್ಚಿ ತಲೆದೂಗದವರಾರು!

ಗಾಳಿಗಳ ಬಗ್ಗೆ ವಿಚಿತ್ರವಾದ ಕಥೆಗಳು ಹುಟ್ಟಿಕೊಳ್ಳುವುದು, ಅವುಗಳಿಗೆ ಬಾಲ ಬೆಳೆಯುವುದು, ಬಣ್ಣ ಬೆಳೆಯುವುದು ಬಹುಮಟ್ಟಿಗೆ ರಾತ್ರಿಯಲ್ಲಿ ಸಂಚರಿಸುವ ಗಂಡಸರಿಂದಲೇ. ಅನಿರೀಕ್ಷಿತವಾಗಿ ಸತ್ತವರು, ಅಕಾಲದಲ್ಲಿ ಮೃತ್ಯುವನ್ನಪ್ಪಿದವರು, ಬಾವಿಗೆ ಬಿದ್ದು ಮಡಿದವರು, ಕೆಲವು ದಿನಗಳಲ್ಲಿ ಮತ್ತೆ ಸಜೀವಗೊಳ್ಳುತ್ತಾರೆ ಗಾಳಿಯ ರೂಪಿನಲ್ಲಿ ಮರಗಳ ಮೇಲೊ, ಬಾವಿಯ ದಡದಲ್ಲೊ, ಹಾಳುಮನೆಗಳಲ್ಲೋ ಯಾವುದಾದರೂ ರೂಪಿನಲ್ಲಿ ಕಾಣಿಸಿಕೊಂಡು ತಾವು ಮರಳಿದ್ದೇವೆ ಎಂಬ ಸೂಚನೆಯನ್ನು ನೀಡುತ್ತವೆ. ಸತ್ತವರ ಮನೆಯಲ್ಲಿ ಇದ್ದಕ್ಕಿದ್ದಂತೆಯೇ ಹಸುವೊ, ಕೋಳಿಯೊ, ಎಮ್ಮೆಯೊ ಸಾಯುತ್ತವೆ.

ರಾತ್ರಿಯಲ್ಲಿ ಹೊಲಗದ್ದೆಗಳ ಬಳಿಗೆ ಹೋಗಿ ಬರುವವರಿಗೆ ವಿಚಿತ್ರ ಅನುಭವಗಳಾಗುತ್ತವೆ. ಹಾದಿಯ ಬದಿಯ ಮರವೊಂದು ಇದ್ದಕ್ಕಿದ್ದಂತೆಯೇ

ನೊರ ನೊರ ಎಂದು ಮುರಿದುಬಿದ್ದಂತೆ ಭಯಂಕರ ಸದ್ದು ಮಾಡುತ್ತದೆ! ಇಲ್ಲವೇ ಇನ್ನೇನು ಅಲ್ಲಿ ಹಾಯುವ ವ್ಯಕ್ತಿಯ ನೆತ್ತಿಯ ಮೇಲೆ ಬಿದ್ದಿತು ಎಂಬಂತೆ ಮರದ ರೆಂಬೆಯೊಂದು ಎದುರಿನಲ್ಲಿಯೇ ಉರುಳಿದಂತಾಗುತ್ತದೆ. ಆಡುಮರಿಯೋ, ಕುರಿಮರಿಯೊ, ಅರಚಿಕೊಂಡು ಹತ್ತಿರ ಬರುತ್ತವೆ. ಯಾರದೋ ತಪ್ಪಿಸಿಕೊಂಡು ಉಳಿದಿದೆ ಎಂದು ಹೆಗಲಲ್ಲಿ ಹೊತ್ತು ತಂದರೆ ಊರು ಸಮೀಪ ವಾದಂತೆ ಅದು ಹೆಣಭಾರವಾಗುತ್ತದೆ. ತಾನು ಹೊತ್ತು ತಂದುದೇನು ಎಂಬ ಅರಿವುಂಟಾದ ಕೂಡಲೆ ಕೆಳಗೆ ಹಾಕಿ ಮುಂದೆ ಸಾಗುತ್ತಾನೆ. "ಬದಿಕ್ಕೊಂಡೇ ಹೋಗು" ಎಂಬ ಧ್ವನಿ ಕೇಳಿಬರುತ್ತದೆ. ಇದ್ದಕ್ಕಿದ್ದಂತೆಯೇ ಹಿಂದಿನಿಂದ ನಾಯೊಂದು ತೋಟದ ಹಾದಿಯಲ್ಲಿ ಇದ್ದಕ್ಕಿದ್ದಂತೆಯೇ ಕಾಣಿಸಿಕೊಂಡು 'ಕುಯ್ ಕುಯ್' ಎನ್ನುತ್ತ ಹಿಂದೆ ಮುಂದೆ ಅಡ್ಡಾಡುತ್ತದೆ, ಸ್ವಲ್ಪ ದೂರ ಹೋದ ಮೇಲೆ ಕಾಣಿಸದಾಗುತ್ತದೆ. ಹಂದಿಯ ಮರಿಯೊಂದು ಪಕ್ಕದ ಪೊದೆ ಯಿಂದ ನುಗ್ಗಿ ಕಾಲು ಕೆಳಗೇ ತೂರಿ ಹೋಗುತ್ತದೆ, ಇಲ್ಲವೇ ಅಡ್ಡ ನುಗ್ಗುತ್ತದೆ! ಎಲ್ಲಿಯೋ ದೂರದ ಗೋಣಿಯ ಮರದ ಹತ್ತಿರ ಹೆಸರೆತ್ತಿ ಯಾರೋ ಕೂಗಿ ದಂತಾಗುತ್ತದೆ. ತಿರುಗಿ ನೋಡಿದರೆ ಯಾರೂ ಇರುವುದಿಲ್ಲ!

ನಿಸರ್ಗದ ನಡುವೆ ಇಂಥ ಎಷ್ಟೋ ಅನುಭವಗಳು ನಮ್ಮೂರಿನ ಮಂದಿಗೆ ಆಗುತ್ತವೆ. ಗುಂಡಿಗೆ ಭದ್ರವಾಗಿರುವವರು ಗಾಳಿಗಳಿಗೆ ಸೊಪ್ಪು ಹಾಕದೆ ಬರು ತ್ತಾರೆ. ಲೆಕ್ಕಿಸದೆ ಮರುದಿನವೂ ಅದೇ ದಾರಿಯಲ್ಲಿ ತಿರುಗುತ್ತಾರೆ. ಧೈರ್ಯ ಶಾಲಿಗಳನ್ನು ಗಾಳಿಗಳು ಏನೂ ಮಾಡಲಾರವು! ಅವರ ದಾರಿಗೆ ಯಾವ ಅಪಾಯವನ್ನೂ ಒಡ್ಡಲಾರವು. ಆದರೆ ಅದರ ಪರಿಣಾಮ ಇನ್ನೊಂದು ರೀತಿ ಯಲ್ಲಿ ಆಗುತ್ತದೆ! ಮೇಲು ಮನೆ ತಿಮ್ಮಕ್ಕ ಗಾಳಿಯಾಗಿದ್ದಾಳಂತೆ, ಕೆಳಮನೆ ಬಸವನಿಗೆ ಹಳ್ಳದ ಹತ್ತಿರ ನಾಯಿಯಾಗಿ ಕಾಣಿಸಿಕೊಂಡಳಂತೆ ಎಂಬ ಅಂತೆ–ಕಂತೆಗಳು ಊರಿನ ಮನೆ ಮನೆಗೂ ಮುಟ್ಟಿ ಜನ ವಿಹ್ವಲರಾಗುತ್ತಾರೆ. ಒಂದು ಬಗೆಯ ಭಯದ ಆವರಣ ಕೆಲದಿನ ಊರಿನ ಮೇಲೆ ಕವಿಯುತ್ತದೆ. ಹೆಂಗಸರು ಮಕ್ಕಳು ಹೊರಗೆ ತಲೆ ಹಾಕುವುದಿಲ್ಲ. ಒಬ್ಬೊಬ್ಬರೇ ಪುರುಷರೂ ಸಹ ಹೊಲ ಗದ್ದೆಗಳ ಬಳಿಗೆ ರಾತ್ರಿಯಲ್ಲಿ ಹೋಗಲು ಅಂಜುತ್ತಾರೆ.

ನಮ್ಮೂರ ಸಂಪಿಗವ್ವನ ಮಗಳು 'ಚೆನ್ನಿ' ತೀರಿಕೊಂಡ ಒಂದು ತಿಂಗಳಲ್ಲೇ ಅವಳು ಗಾಳಿಯಾಗಿದ್ದಾಳೆ ಎಂಬ ಸುದ್ದಿ ಹರಡಿತು !

"ಅಯ್ಯೋ ನನ್ನ ದೇವಗನ್ನೆ ತಿಂದುಕೊಂಡರು.

ನನ್ನ ಅಚ್ಚಗನ್ನೆ ತಿಂದುಕೊಂಡರು !"

ಎಂದು ಸಂಪಿಗವ್ವ ಹಗಲು ರಾತ್ರಿ ಅಳತೊಡಗಿದಳು. ತಾಯಿಯ ಸ್ವಪ್ನದಲ್ಲಿ ಕಾಣಿಸಿಕೊಂಡ ಚೆನ್ನಿ—

"ನೀ ಯಾಕೆ ಅಳ್ತೀಯವ್ವ! ನಾನು ಎಲ್ಲಿಗೂ ಹೋಗಿಲ್ಲ! ಇಲ್ಲೇ ಸೀಬಿ ವನದ ಮೇಲೆ ಇದ್ದೀನಿ" ಎಂದಳಂತೆ. ಸಂಪಿಗವ್ವ ತಾನೇ ಯಾರ ಕೈಯಲ್ಲೋ ಇದನ್ನು ಹೇಳಿಕೊಂಡಳು. ಏನೋ ಮದ್ದುಕೊಟ್ಟು, ನಮ್ಮೂರ ಶಾಲೆಯ ಜವಾನ ಅವಳನ್ನು ಕೊಂದನೆಂದು ಅವರಿವರು ಆಡಿಕೊಂಡುದುಂಟು. ರಾತ್ರಿ ಜವಾನ ಜವರಯ್ಯ ಶಾಲೆಯಲ್ಲಿ ಮಲಗಲೇ ಬೇಕಾಗಿದ್ದಿತು. ಶಾಲೆಯಿರುವುದು ಹನುಮಂತರಾಯನ ಗುಡಿಯ ಆಚೆ, ಊರಿನ ಹೊರಗೆ! ರಾತ್ರಿ ಒಂದು ಹೊತ್ತಿನಲ್ಲಿ ಯಾರೋ ಬಂದು ಬಾಗಿಲು ತಟ್ಟಿದಂತೆ ಕುರ್ಚಿಯನ್ನು ಎಳೆದಂತೆ, ಬೆಂಚಿನ ಮೇಲೆ ಕುಳಿತಂತೆ ಅಲ್ಲೆಲ್ಲ ನಡೆದಾಡಿದಂತೆ ಅನುಭವವಾಗತೊಡಗಿತು ಅವನಿಗೆ. ಜೊತೆಯಲ್ಲಿ ಯಾರನ್ನೋ ಕರೆದುಕೊಂಡು ಹೋಗಿ ಜವರ ಮಲಗತೊಡಗಿದ. ಜವರನ ಪಕ್ಕದಲ್ಲೇ ಬೆಂಚುಗಳನ್ನು ಜೋಡಿಸಿ ಒಂದೇ ಕಂಬಳಿಯನ್ನು ಹೊದ್ದು ಮಲಗಿದ್ದ ಮಾದ ಕೋಳಿ ಕೂಗುವ ಹೊತ್ತಿಗೆ ಕಣ್ಣುಬಿಟ್ಟು ನೋಡುತ್ತಾನೆ, ಶಾಲೆಯ ಹೊರಗೆ ತಿಪ್ಪೆಯ ಗುಂಡಿಯ ಮೇಲೆ ಅವನು ಮಲಗಿದ್ದಾನೆ !

ನಮ್ಮೂರಿನಲ್ಲಿ ಎಷ್ಟೋ ಮಂದಿ ತೀರಿಕೊಂಡಿದ್ದಾರೆ. ಸಹಜ ರೀತಿಯಲ್ಲಿ, ವೃದ್ಧಾಪ್ಯದ ಗಡಿಯನ್ನು ಮುಟ್ಟಿ ಮಡಿದವರನ್ನು ಉಳಿದು, ಬಹು ಮಂದಿಯ ಬಗೆಗೆ ಇಂಥ ಕತೆಗಳು ಕಾಣಿಸಿಕೊಂಡು ಭಯದ ತೆರೆಯನ್ನು ಆಡಿಸಿ ಕಣ್ಮರೆಯಾಗುತ್ತವೆ. ವಿಚಿತ್ರ ರೀತಿಯಲ್ಲಿ ಇನ್ನಾರೋ ಮಡಿದಾಗ ಆ ಕತೆಗಳು ಮತ್ತೆ ಮರುಕಳಿಸುತ್ತವೆ.

ಬಹುಪಾಲು ಘಟನೆಗಳೆಲ್ಲ ಊರ ಹೊರಗೇ ನಡೆಯುತ್ತವೆ. ನಮ್ಮೂರ ಹನುಮಂತರಾಯ ಮಹಾ ಕೋಪಿಷ್ಠ. ಯಾವ ಭೂತ ಪ್ರೇತಗಳನ್ನೂ, ರೋಗದ ಮಾರಿಯರನ್ನೂ ಅವನು ಊರಿಗೆ ಸೇರಿಸುವುದಿಲ್ಲ. ಊರ ಹೊರಗೆ ಅಡ್ಡಾಡಿಸಿಕೊಂಡು ಹೊಡೆದು ಓಡಿಸುತ್ತಾನೆ. ಬೆಳ್ಳೂರಿಗೆ ಪ್ಲೇಗು ಬಂದಾಗ

ಹತ್ತಿರದಲ್ಲೇ ಇರುವ ನಮ್ಮೂರಿಗೆ ಬರಲಿಲ್ಲ. ನೂರಾರು ಪ್ಲೇಗು ಮಾರಿಯರು ನಮ್ಮೂರಿನ ದಾರಿಯಲ್ಲಿ ಬರುತ್ತಿದ್ದುದನ್ನು ಕಂಡ ಹನುಮಂತರಾಯ ಅವರನ್ನು ವೀರವೈಷ್ಣವ ನದಿಯವರೆಗೂ ಅಟ್ಟಿಸಿಕೊಂಡು ಹೋದ ದೃಶ್ಯವನ್ನು ನಮ್ಮೂರ ಅರ್ಚಕರು ಕನಸಿನಲ್ಲಿ ಕಂಡರಂತೆ. ಇಂಥ ಪ್ರಬಲ ದೈವ ಊರನ್ನು ರಕ್ಷಿಸುವಾಗ ಯಾವ ಗಾಳಿಗೆ ಊರನ್ನು ಪ್ರವೇಶಿಸುವ ಧೈರ್ಯ !

ಕೆಲವು ಊರುಗಳನ್ನು ಗಾಳಿಗಳು ಪ್ರವೇಶಿಸಿದ ನಿದರ್ಶನಗಳೂ ಉಂಟು. ಮನೆಗಳ ಮೇಲೆ ಧಾಳಿ ಮಾಡುವುದು, ಹೆಂಚುಗಳನ್ನು ಹಾರಿಸುವುದು, ಬಾಗಿಲುಗಳನ್ನು ಧಡಬಡನೆ ಬಡಿಯುವುದು, ವಸ್ತುಗಳನ್ನು ಅತ್ತಿತ್ತ ಎಸೆಯುವುದು, ಮಕ್ಕಳ ತೊಟ್ಟಿಲನ್ನು ತೂಗುವುದು, ದನಗಳನ್ನು ಗೊತ್ತು ಕಳಚಿ ಹೊರಗೆ ಅಟ್ಟುವುದು ಹೀಗೆ ಅನೇಕ ವಿಚಿತ್ರ ಘಟನೆಗಳು ಕೆಲವು ನಡೆದಿವೆ. ಹೇಗೋ ಅವರಿವರ ಮೈಯನ್ನು ಸೇರಿಕೊಂಡು ಹನು ಮಂತರಾಯನಿಗೆ ಗೋಚರಿಸದೆ ಕೆಲವು ಗಾಳಿಗಳು ಬಂದಿರುವುದನ್ನು ಹೊರತು ನೇರವಾಗಿ ಊರನ್ನು ಹೊಕ್ಕು ಘಾಸಿಪಡಿಸಿದ ಪ್ರಸಂಗಗಳು ಯಾವುವೂ ನಡೆದಿಲ್ಲ.

ಗಾಳಿಗಳು ಮನುಷ್ಯನಿಗೆ ಹೆದರಿದ ಪ್ರಸಂಗ ಯಾವುದೂ ಇಲ್ಲ. ಆದರೆ ಅವು ಹೆದರಿಸುವ ಸನ್ನಿವೇಶಗಳು ಹೆಚ್ಚು. ನಮ್ಮ ಕಾಲಲ್ಲಿ ಎಕ್ಕಡವಿದ್ದರೆ ಹತ್ತಿರ ಸುಳಿಯವು ಎಂದು ಕೆಲವರ ನಂಬಿಕೆ. ಆದರೆ ಉಳ್ಳೂರು ರಾಮಯ್ಯ ನವರು ಅತ್ತೆಯ ಮನೆಗೆ ಹೋಗುವಾಗ, ಕಂಚಿನ ಕೋಟೆಯ ಸೇತುವೆಯ ಬಳಿ ಭಯಂಕರ ಪ್ರಸಂಗವೊಂದನ್ನು ಎದುರಿಸಿದ ವಿಚಾರವನ್ನು ನಮ್ಮ ತಂದೆ ಯವರು ಹೇಳುತ್ತಿದ್ದರು. ಅಮಾವಾಸ್ಯೆಯ ಹಿಂದಿನ ದಿನ. ರಾಮಯ್ಯ ನವರು ನೆಲ್ಲಿಗೆರೆಯ ಅತ್ತೆಯ ಮನೆಗೆ ಹೊರಟಿದ್ದಾರೆ. ಉಣ್ಣುವ ಹೊತ್ತು; ಕಳೆದ ರಾತ್ರಿ ರಸ್ತೆಯಲ್ಲಿ ಯಾರ ಸಂಚಾರವೂ ಇಲ್ಲ. ಸೇತುವೆಯನ್ನು ದಾಟಿ ನಾಲ್ಕು ಹೆಜ್ಜೆ ಮುಂದೆ ಬಂದಿರಬೇಕು. ಇದ್ದಕ್ಕಿದ್ದಂತೆಯೇ ಅರಿಸಿಣದ ನೀರು ಚೆಲ್ಲಿಕೊಂಡಂತಾಯಿತು. ಬಳಿಯ ತೋಪಿನಿಂದ ಎರಡು ಆಕೃತಿಗಳು ಕಾಣಿಸಿಕೊಂಡವು! ರಾಮಯ್ಯನ ಕಾಲುಗಳಲ್ಲಿ ನಡುಕ ಉಂಟಾಯಿತು. ನಿಲ್ಲುವ ಶಕ್ತಿಯಿಲ್ಲದೆ ನೆಲದ ಮೇಲೆ ಕುಸಿದು ಬಿದ್ದನು. ಅವನ ಎಕ್ಕಡ

